

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೭ ಆಗಸ್ಟ್ ೨೦೧೧ ಸಂಚಿಕೆ : ೮



ಪರಮಪೂಜ್ಯ ಶ್ರೀ.ಮ.ನಿ.ಪ್ರ.ಸ್ವ. ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ಶ್ರೀಮಠದ ಉತ್ತರಾಧಿಕಾರಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಗೆ ಅಧಿಕಾರ ಹಸ್ತಾಂತರ



ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಭಕ್ತಿ ಸಮರ್ಪಣೆ. ಸುತ್ತೂರು ಜಗದ್ಗುರುಗಳು ಹಾಗೂ ನಿವೃತ್ತ ನ್ಯಾಯಮೂರ್ತಿ ವಿ.ಎಸ್. ಮಳಿಮಠ ಉಪಸ್ಥಿತರಿದ್ದರು



ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ಮಂಗಳನುಡಿ

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ,
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಾಗಲು ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೭ ಆಗಸ್ಟ್ ೨೦೧೧ ಸಂಚಿಕೆ : ೮

## ಒಳಪುಟಗಳಲ್ಲಿ ..................



ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

## ದೊಡ್ಡವರ ನಡೆ

ಕಳೆದ ವಾರ ಘನತೆವೆತ್ತ ರಾಜ್ಯಪಾಲರಾದ ಶ್ರೀ ಹಂಸರಾಜ್ ಭಾರದ್ವಾಜ್ ಅವರು ಪರಮಪೂಜ್ಯ ಸಿದ್ಧಗಂಗಾ ಶ್ರೀಗಳವರ ಜೊತೆಯಲ್ಲಿ ತುಮಕೂರು ತಾಲ್ಲೂಕು ಬೆಳಗುಂಬ ಗ್ರಾಮದ ಸಮೀಪ ವಿದ್ಯಾರ್ಥಿನಿಲಯದ ಸಮಾರಂಭದಲ್ಲಿ ಪಾಲ್ಗೊಂಡಿದ್ದ ಸಂದರ್ಭ. ಶ್ರೀಗಳವರಿಗೀಗ ೧೦೪ ವರ್ಷಗಳು. ದೇಹ ಬಾಗಿದೆ. ನಡಿಗೆ ನಿಧಾನವಾಗಿದೆ. ಆದರೆ ಕಣ್ಣು ನಿಚ್ಚಳ, ನೆನಪು ದಟ್ಟ, ಮಾತು ಶುದ್ಧ ಸ್ಫಟಿಕ, ಸ್ಪಷ್ಟ. ಸಮಾರಂಭ ಮುಗಿದು ಶ್ರೀಗಳು ವೇದಿಕೆಯಿಂದ ಕೆಳಗೆ ಇಳಿಯುವ ಸನ್ನಿವೇಶ. ತಕ್ಷಣ ಸ್ವತಃ ರಾಜ್ಯಪಾಲರೇ ಎದ್ದು ಬಂದು ಶ್ರೀಗಳ ಪಕ್ಕದಲ್ಲಿ ನಿಂತು ಕೈಹಿಡಿದು ನಿಧಾನವಾಗಿ ಶ್ರೀಗಳವರನ್ನು ಕೆಳಗೆ ಇಳಿಸಿದರು. ತಾವೊಬ್ಬ ರಾಜ್ಯಪಾಲರು ಎಂಬುದನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ. ಮಾನವೀಯತೆಯನ್ನು ಮೆರೆದರು. ಹೃದಯದ ಕಣ್ಣಿನಿಂದ ನಡೆದುಕೊಂಡರು. ಮತ್ತೊಬ್ಬರು ನೋಡಲಿ ತಮ್ಮನ್ನು ಎಂದು ಮಾಡಲಿಲ್ಲ. ವೃದ್ಧರನ್ನು, ತಪಸ್ವಿಗಳನ್ನು ಗೌರವಿಸುವುದು ದೇವರಪೂಜೆ ಎಂದೇ ಭಾವಿಸಿದರು. ನೆರೆಕೆನ್ನೆಗೆ, ತೆರೆಗಲ್ಲಕೆ, ಶರೀರಗೂಡು ಹೋಗದ ಮುನ್ನ, ಕಾಲಮೇಲೆ ಕೈಯನೂರಿ, ಕೋಲು ಹಿಡಿಯದ ಮುನ್ನ, ಮುಪ್ಪಿಂದ ಒಪ್ಪವಳಿಯದ ಮುನ್ನ, ಮೃತ್ಯುಮುಟ್ಟದ ಮುನ್ನ ಪೂಜಿಸು ಕೂಡಲಸಂಗಮ ದೇವನ'-ಎಂಬ ಬಸವಣ್ಣನವರ ವಚನವನ್ನು ನೆನಪಾಗುವಂತೆ ನಡೆದುಕೊಂಡರು ರಾಜ್ಯಪಾಲರು. ಅಧಿಕಾರವಿರುವುದು, ಬರುವುದು, ಮಾನವೀಯತೆಯನ್ನು ಗೌರವಿಸುವುದಕ್ಕಾಗಿ, ಸುಸಂಸ್ಕೃತ ರೀತಿಯಲ್ಲಿ ಬಾಳುವುದಕ್ಕಾಗಿ. ದೊಡ್ಡವರು ನಡೆಯುವ ಹಾದಿ ದೊಡ್ಡದಾಗಿಯೇ ಇರುತ್ತದೆ. ಸುಸಂಭಾವಿತ ಘನತೆವೆತ್ತ ರಾಜ್ಯಪಾಲರನ್ನು 'ಸಿದ್ಧಗಂಗಾ' ತುಂಬುಹೃದಯದಿಂದ ಅಭಿನಂದಿಸಲು ಸಂತೋಷಿಸುತ್ತದೆ.

'ಒಲೆಹೊತ್ತಿ ಉರಿದೊಡೆ ನಿಲಬಹುದಲ್ಲದೆ, ಧರೆ ಹೊತ್ತಿ ಉರಿದೊಡೆ ನಿಲಬಹುದೆ? ಏರಿ ನೀರುಣ್ಬೊಡೆ ಬೇಲಿಕೆಯ್ಯಮೇವೊಡೆ, ತಾಯ ಮೊಲೆ ಹಾಲು ನಂಜಾಗಿ ಕೊಲುವೊಡೆ ಇನ್ನಾರಿಗೆ ದೂರುವೆ ಕೂಡಲಸಂಗಮದೇವಾ'- ಎಂದರು ಬಸವಣ್ಣನವರು. ಇಂದಿನ ಪ್ರಜಾ ಪ್ರತಿನಿಧಿಗಳ ರೀತಿನೀತಿಗಳನ್ನು ನೋಡಿದರೆ ಅದೆಷ್ಟು ಸತ್ಯ ಎನಿಸುತ್ತದೆಯಲ್ಲವೆ ವಚನ. ಆಳುವವರ ಅಡ್ಡದಾರಿಯಿಂದಾಗಿ ಜನಸಾಮಾನ್ಯರ ಜೀವನ ಪ್ರಪಾತದತ್ತ ನಡೆಯುವಂತಾಗಿದೆ ಎನಿಸುತ್ತದೆ. ಹಳ್ಳಿಗರ ಅನುಭವದ ಮಾತೊಂದಿದೆ 'ಅವರ್ನ್ ಬಿಟ್ಟವರ್‍ಯಾರು'- ಎಲ್ಲರೂ ಸುಳ್ಳು ನಮ್ಮಲ್ಲಿಲ್ಲ ಸುಳ್ಳೇ ನಮ್ ಮನೆ ದೇವರು' ಎಂಬುವವರೇ ಆಗಿದ್ದಾರೆ. ಕಾಲವೇ ಸರಿ ಮಾಡಬೇಕು. ಈ ಎಲ್ಲವನ್ನು ಎನ್ನುವಂತಾಗಿದೆ.

೧೯೪೭ ಆಗಸ್ಟ್ ೧೫ ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದ ದಿನ. ಕನಸುಗಳನ್ನು ಹೊತ್ತು ತಂದ ದಿನ. ಅಂದು 'ಪೂರ್ವದ ಪುಣ್ಯ ದಿಗಂತದಿ ನವ ಅರುಣೋದಯ' ವಾಯಿತು. ಆದರೆ ಇಂದು ಆಗಿರುವುದು ಆಗುತ್ತಿರುವುದು ಏನು? ಹಗರಣ ಹಗರಣ ಹಗರಣಗಳ ರಿಂಗಣ. ಭಾರತೀಯರ ಬದುಕು ಬಂಗಾರವಾಗಬೇಕೆಂದುಕೊಂಡು ಸ್ವಾತಂತ್ರ್ಯ ತಂದು ಕೊಟ್ಟ 'ಆತ್ಮ'ಗಳು ಕಣ್ಣೀರಿಡುವಂತೆ ಆಗಿರುವುದಕ್ಕೆ ಯಾರತ್ತ ಬೆರಳು ಮಾಡುವುದು. ಆತ್ಮಾವಲೋಕನ ಮಾಡಿಕೊಳ್ಳ ಬೇಕಲ್ಲವೇ ಪ್ರತಿಯೊಬ್ಬರು. ನಾನು ದೇಶಕ್ಕಾಗಿ ಮಾಡಿದ್ದೇನು? ಎಂದು ಕೇಳಿಕೊಳ್ಳಬೇಕಲ್ಲವೇ?

**ನೂತನ ಮುಖ್ಯಮಂತ್ರಿಗಳಾಗಿ ಆಯ್ಕೆಗೊಂಡ ಸನ್ಮಾನ್ಯ ಶ್ರೀ ಡಿ.ವಿ. ಸದಾನಂದಗೌಡ ಅವರನ್ನು ಅಭಿನಂದಿಸಲು 'ಸಿದ್ಧಗಂಗಾ' ಹರ್ಷಿಸುತ್ತದೆ.**

*-ಸಂಪಾದಕ*







## ನೆನಪು

ನಿನ್ನೆ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು, ಶ್ರೀ ಪ್ರಭುಸ್ವಾಮಿಗಳು ಮತ್ತು ಪ್ರೊ. ಮಲೆಯೂರು ಗುರುಸ್ವಾಮಿಯವರು ಬಂದಿದ್ದರು. ಲಿಂಗೈಕ್ಯ ಪೂಜ್ಯರಾದ ಅರಮನೆ ಪಂಚಗವಿಮಠದ ಶ್ರೀ ಶ್ರೀ ಗೌರಿಶಂಕರಮಹಾಸ್ವಾಮಿಗಳವರನ್ನು ಕುರಿತು ಸುತ್ತೂರು ಮಠದ ವತಿಯಿಂದ ಗ್ರಂಥವನ್ನು ಪ್ರಕಟಣೆ ಮಾಡುವ ಉದ್ದೇಶವನ್ನು ಅರಿಕೆ ಮಾಡಿಕೊಂಡರು. ಶ್ರೀಗಳವರನ್ನು ಕುರಿತು ನಮಗೆ ನೆನಪಿರುವ ಪ್ರಸಂಗಗಳನ್ನು ಕುರಿತು ಹೇಳುವಂತೆ ಬಿನ್ನವಿಸಿಕೊಂಡರು. ನೆನಪುಗಳು ಯಾವತ್ತಿಗೂ ಬೆಳಕು ನೀಡುವಂಥದಾಗಿದ್ದವೆಂಬುದನ್ನು ಹಂಚಿಕೊಂಡೆವು.

ಪೂಜ್ಯ ಶ್ರೀ ಶ್ರೀ ಗೌರಿಶಂಕರಮಹಾಸ್ವಾಮಿಗಳವರು ಅದ್ಭುತ ವ್ಯಕ್ತಿತ್ವದ ಜ್ಞಾನಮೇರು ವಾಗಿದ್ದವರು. ವಿದ್ವತ್ತಿನ ಹಿಮಾಲಯವೆನ್ನಬೇಕು. ಶ್ರೀಗಳವರ ಸಾಮೀಪ್ಯ ಒಂದು ಅಪೂರ್ವ ಮಹಾಭಾಗ್ಯವಾಗಿದ್ದಿತು. ಅವರೊಡನೆ ನಮಗಿದ್ದ ಆತ್ಮೀಯತೆಯನ್ನು ನೆನೆದರೆ ಆನಂದವಾಗುತ್ತದೆ. ಒಮ್ಮೆ ಪೂಜ್ಯರನ್ನು ಭಕ್ತರೊಬ್ಬರು ಕೇಳಿದರಂತೆ. 'ಬುದ್ಧೀ, ತಾವು ಹಣೆಗೆ ಭಸ್ಮವನ್ನು ಧರಿಸುವ ರೀತಿ ನಮಗೆ ಕುತೂಹಲವನ್ನು ಉಂಟುಮಾಡಿದೆ. ಹಣೆ ತುಂಬಾ ಭಸ್ಮವನ್ನು ನಡುವೆ ಬಿಡುವು ಕಾಣದಂತೆ ಧರಿಸುತ್ತೀರಿ, ಏಕೆ?' ಎಂದರಂತೆ. ಅದಕ್ಕೆ ಪೂಜ್ಯರು ಕೊಟ್ಟ ಉತ್ತರ 'ನೋಡಿ ಬ್ರಹ್ಮ ಹಣೆ ಬರಹ ಬರೆದಿರುತ್ತಾನೆ. ಆ ಬರಹವನ್ನು ಅಳಿಸಿಬಿಡಬೇಕೆಂದುಕೊಂಡು ಭಸ್ಮವನ್ನು ಧರಿಸಿಬಿಡುತ್ತೇನೆ' ಎಂದರಂತೆ. ಹಾಸ್ಯಕ್ಕೆ ಹೇಳಿದ್ದಾದರೂ ಶ್ರೀಗಳವರ ಅನುಭಾವದನುಡಿ 'ಮಾತುಮೌನಗಳಿಂದತ್ತತ್ತ ಮೀರಿದ ಜ್ಯೋತಿ' ಎನ್ನಬಹುದಾಗಿದೆ. ಒಮ್ಮೆ ರಾಮನಗರ ತಾಲ್ಲೂಕು ದೊಡ್ಡಗಂಗವಾಡಿ ಗ್ರಾಮದಲ್ಲಿ ಗ್ರಾಮಾಂತರ ಬಸವ ಜಯಂತಿ ನಡೆದಿತ್ತು. ಆ ಗ್ರಾಮದ ಹಿರಿಯರಾದ ಶ್ರೀ ದೊಡ್ಡವೀರಪ್ಪನವರು ಒಂದು ಮಾತು ಹೇಳಿದ್ದು ನೆನಪಿಗೆ ಬರುತ್ತಿದೆ- ಶ್ರೀ ಗೌರಿಶಂಕರಸ್ವಾಮಿಗಳು ಹೋದದ್ದು ಒಂದು ಮುತ್ತು ಕಳೆದುಹೋದಂತಾಯಿತು. ಸಮಾಜದ ಬಹುದೊಡ್ಡ ಭಾಗ್ಯವಾಗಿದ್ದರು. ಅವರ ವಿದ್ವತ್ತಿನ ಮುಂದೆ ಯಾರೂ ನಿಲ್ಲುವಂತಿರಲಿಲ್ಲ. ಆ ಮಹಾನುಭಾವರ ನೆನಪೇ ಒಂದು ಶಿವಾನುಭವ ಎಂದದ್ದುಂಟು. ನಿಜ, ಪೂಜ್ಯ ಶ್ರೀ ಶ್ರೀ ಗೌರಿಶಂಕರಮಹಾ ಸ್ವಾಮಿಗಳ ನೆನಪು ಯಾವತ್ತಿಗೂ ಒಂದು ಬೆಳಕು. ❑

ಓಂ

# ಶ್ರೀ ಸಿದ್ಧಲಿಂಗೇಶ್ವರ ವಚನ

*ಕೆಂಜೆಡೆಯ ಭಾಳನೇತ್ರಂ*
*ರಂಜಿಪ ರವಿಕೋಟಿ ತೇಜದಿಂದುರವಣಿಪಂ*
*ಕಂಜ ಪದಯುಗದೊಳು ಹೊಳೆವ್ರತಿಹ ನಂಜುಗೊರಳಭುವ*
*ಭವಕುಕ್ಷಿಯಿಳೀರೇಳು ಭುವನವಂ ಮಿಗೆ ತಾಳ್ದ*
*ರಾಕ್ಷಸ ಹರ ರಕ್ಷಿಸೆನ್ನುವಂ*
*ಹರ ಹರಾ ಶಿವ ಶಿವಾ ಜಯ ಜಯ ಜಯತು*
*ಶರಣ ಕರುಣಾಕರ ತ್ರಾಹಿ ಮಾಂ ಭಕ್ತವತ್ಸಲ ಮತ್ಪ್ರಾಣನಾಥ*
*ಮಹಾಲಿಂಗುರು ಶಿವಸಿದ್ಧೇಶ್ವರ ಪ್ರಭುವೇ.*

ಶ್ರೀ ಸಿದ್ಧಲಿಂಗೇಶ್ವರರು ಈ ವಚನದಲ್ಲಿ ಶಿವನ ವರ್ಣನೆಯನ್ನು ಮಾಡಿದ್ದಾರೆ. ಶಿವನಿಗೆ ಕೆಂಜೆಡೆಯಿದೆ. ಹಣೆಗಣ್ಣಿನವನಾಗಿದ್ದಾನೆ. ಕೋಟಿ ಸೂರ್ಯಪ್ರಕಾಶಮಾನವಾಗಿದ್ದಾನೆ. ಕಮಲ ಪಾದಗಳಿವೆ. ನೀಲಕಂಠ, ವಿಷಕಂಠ, ಶ್ರೀಕಂಠನಾಗಿದ್ದಾನೆ. ಹದಿನಾಲ್ಕು ಲೋಕಗಳನ್ನಡಗಿಸಿಕೊಂಡಿದ್ದಾನೆ ತನ್ನ ಉದರದಲ್ಲಿ, ರಾಕ್ಷಸರನ್ನು ಸಂಹರಿಸಿದವನಾಗಿದ್ದಾನೆ. ಇಂಥ ಮಹಾ ಮಹಿಮನಾಗಿರುವ ಶಿವನನ್ನು 'ಹರ ಹರ, ಶಿವ ಶಿವಾ, ಜಯ ಜಯ ಕರುಣಾಕರ, ಭಕ್ತವತ್ಸಲ, ಪ್ರಾಣನಾಥ ರಕ್ಷಿಸು ಎಂದು ಪ್ರಾರ್ಥಿಸುತ್ತಾರೆ.

# ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಆಧಾರವಾಗಿರುವೆ ಯಾರಿರದ ದೀನರಿಗೆ
ಆರೈಕೆ ಮಾಡಿ ಸಲಹಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತನ್ನ ತಾನರಿಯುವ ಪರಿಯನೀತಿಳಿದಿರುವೆ
ನಾನೆಂತು ಅದನ ಅರಿಯುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಒಲೆಯಲಟ್ಟುಂಬರ ತಲೆಯಲಟ್ಟುಂಡೆಂದೆ
ಸಲೆ ತಿಳಿದು ವಿನಯದಿ ನಡೆಯೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಕೆಂಡವ ಒರಲೆ ಮುಟ್ಟಬಲ್ಲದೆ' ಗುರುವೆ
ಒರಲೆ ಮನುಜರು ನಿಮ್ಮ ಮುಟ್ಟುವರೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯದ ಜೀವದ ಹೊಲಿಗೆಯನರಿತಿಹ
ದೇವಭಾವದೊಳಿಹ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾದ ನೀನಾಗಿರುವೆ ಬಿಂದು ನೀನಾಗಿರುವೆ
ನಾದಬಿಂದು ಕಳೆಯಾಗಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವಾ ಬಸವಾ ಬಸವಾ ಬಸವನೆಂದು ನುಡಿದು
ಬಸವಣ್ಣನಾಗಿ ಬೆಳಗಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಾಶ್ವತ ಘನವೆನ್ನ ವೇದವ ಘನವೆನ್ನ
ದಾಸೋಹ ಸಿರಿಯ ಹೊರಗಿರಿಸಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಣತಿ ಬರುವನಕ ಸೇವೆ ಸಲ್ಲಿಪ ಬಯಕೆ
ಆನಂದ ವೀಯುವ ತವಪದಕೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರ ಸರ್ವಕೆ ಆಶ್ರಯನಾಗಿರುವೆ
ಸೂತಕ ಸರ್ವವ ಮೀರಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





# ನಡೆದಾಡುವ ದೇವರಿಂದ ಕಾರುಣ್ಯದ ಶಿಶು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರಿಗೆ ಅಧಿಕಾರ ಹಸ್ತಾಂತರ

ಸುಮಾರು ಎಂಟುನೂರು ವರ್ಷಗಳ ಭವ್ಯ ಪರಂಪರೆ ಹಾಗೂ ಇತಿಹಾಸವಿರುವ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ದಿನಾಂಕ ೦೪-೦೮-೨೦೧೧ರ ನಾಗರಪಂಚಮಿಯಂದು ಶ್ರೀಮನ್ನಿರಂಜನ ಪ್ರಣವ ಸ್ವರೂಪಿ, ತ್ರಿವಿಧ ದಾಸೋಹ ಮೂರ್ತಿ, ನಡೆದಾಡುವ ದೇವರು, ವೈರಾಗ್ಯದ ಗೌರಿಶಂಕರ, ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳ ದಿವ್ಯ ಸಾನ್ನಿಧ್ಯ ಹಾಗೂ ಸುತ್ತೂರು ಜಗದ್ಗುರು ಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿಗಳವರ ನೇತೃತ್ವ, ವಿವಿಧ ಮಠಗಳ ಹರಗುರುಚರಮೂರ್ತಿಗಳವರ ಸಮ್ಮುಖದಲ್ಲಿ ನಡೆದ ಸರಳ ಹಾಗೂ ಐತಿಹಾಸಿಕ ಸಮಾರಂಭದಲ್ಲಿ ಎಂಬತ್ತೆರಡು ವರ್ಷಗಳು ನಿರಂತರವಾಗಿ ಶ್ರೀಮಠವನ್ನು ಮುನ್ನಡೆಸಿ ವಿಶ್ವದ ಆಧ್ಯಾತ್ಮಿಕ ಭೂಪಟದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರದ ಹೆಸರನ್ನು ದಾಖಲಿಸಿದ ಪರಮಪೂಜ್ಯ ಶ್ರೀ ಶ್ರೀಗಳವರು ತಮ್ಮ ಕಾರುಣ್ಯದ ಶಿಶು, ಶ್ರೀಮಠದ ಉತ್ತರಾಧಿಕಾರಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರಿಗೆ ಶ್ರೀಮಠದ ಆಡಳಿತಾತ್ಮಕ ಅಧಿಕಾರವನ್ನು ಹಸ್ತಾಂತರ ಮಾಡಿದರು. ಈ ಶುಭ ಸಮಾರಂಭಕ್ಕೆ ಶುಭ ಕೋರಿದ ವರುಣನು ತುಂತುರು ಹೂಮಳೆಯನ್ನು ಸುರಿಸಿದುದು ಭಕ್ತರ ಮನಸ್ಸಿನಲ್ಲಿ ಪುಳಕವನ್ನುಂಟುಮಾಡಿತು.

ಶ್ರೀಮಠದ ಗುರುಪರಂಪರೆಯಲ್ಲಿ ಅನೇಕ ಜನ ಗುರುಗಳು ಆಗಿ ಹೋಗಿದ್ದರೂ ಅವರಲ್ಲಿ ಧ್ರುವತಾರೆಗಳಂತೆ ಶ್ರೀಮಠದ ಇತಿಹಾಸದಲ್ಲಿ ಮಿಂಚಿದವರು ಶ್ರೀ ಗೋಸಲ ಸಿದ್ಧೇಶ್ವರರು, ಶ್ರೀ ತೋಂಟದ ಸಿದ್ಧಲಿಂಗೇಶ್ವರರ ನಂತರ ಕೆಲವು ಕಾಲ ಶ್ರೀಮಠದಲ್ಲಿ ತಪಸ್ಸನ್ನಾಚರಿಸಿ ಶ್ರೀ ಉದ್ದಾನ ಶಿವಯೋಗಿಗಳಿಗೆ ನಿರಂಜನ ದೀಕ್ಷೆಯನ್ನು ನೀಡಿದ ಶ್ರೀ ಅಟವೀಸ್ವಾಮಿಗಳು, ಶ್ರೀ ಉದ್ದಾನ ಶಿವಯೋಗಿಗಳು. ಶ್ರೀ ಉದ್ದಾನಶಿವಯೋಗಿಗಳವರ ಕರಕಮಲ ಸಂಜಾತರಾದ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಶ್ರೀಮಠವನ್ನು ಪ್ರಗತಿ ಪಥದಲ್ಲಿ ಮುನ್ನಡೆಸಿದರು. ಅವರು ನಿರಂಜನ ಪಟ್ಟಾಧಿಕಾರ ವಹಿಸಿಕೊಂಡ ಸಂದರ್ಭದಲ್ಲಿ ೮೦ ಮಂದಿ ವಿದ್ಯಾರ್ಥಿಗಳಿದ್ದರು. ಈಗ ಆ ವಿದ್ಯಾರ್ಥಿಗಳ ಸಂಖ್ಯೆ ೯ ಸಾವಿರಕ್ಕೂ ಹೆಚ್ಚುವಂತೆ ಮಾಡಿ ಶ್ರೀಮಠವನ್ನು ಜ್ಞಾನದಾಸೋಹ, ಅನ್ನ ದಾಸೋಹಗಳ ಮಹಾಮನೆಯನ್ನಾಗಿ ಮಾಡಿ ದೀನದಲಿತರಿಗೆ, ಬಡವರಿಗೆ ಆಶ್ರಯ ನೀಡಿ ಅವರ ಭವಿಷ್ಯ ಉಜ್ವಲವಾಗುವಂತೆ ಮಾಡಿದುದು ಒಂದು ಐತಿಹಾಸಿಕ ದಾಖಲೆ. ನೂರ ನಾಲ್ಕು ವಸಂತಗಳ ಬೇವು ಬೆಲ್ಲವನ್ನು ಸವಿದ ಪೂಜ್ಯ



ಶ್ರೀಗಳವರು ಶಿವಯೋಗಾನುಷ್ಠಾನದಿಂದ ಮಠವನ್ನು 'ನ ಭೂತೋ ನ ಭವಿಷ್ಯತಿ' ಎನ್ನುವಂತೆ ಬೆಳೆಸಿದರು. ಎಲ್ಲ ಜಾತಿ ವರ್ಗದವರಿಗೆ ಅವಕಾಶ ಕಲ್ಪಿಸಿಕೊಟ್ಟು ಸರ್ವ ಧರ್ಮ ಸಮನ್ವಯದ ಕೇಂದ್ರವನ್ನಾಗಿ ಬೆಳೆಸಿದರು.

ಪೂಜ್ಯ ಶ್ರೀ ಶ್ರೀಗಳವರೇ ಅಪ್ಪಣೆ ಕೊಡಿಸಿದಂತೆ ವಯೋಧರ್ಮದಿಂದ ಶ್ರೀಮಠದ ಸಮಸ್ತ ಕಾರ್ಯಭಾರ ವನ್ನು ಹೊರಲು ಕಷ್ಟವಾಗುತ್ತಿರುವುದನ್ನು ಅರಿತು ತಮ್ಮ ಉತ್ತರಾಧಿಕಾರಿಗಳಾದ ಶ್ರೀ ಸಿದ್ಧಲಿಂಗಸ್ವಾಮಿಗಳವರಿಗೆ ಶ್ರೀಮಠದ ಆಡಳಿತಾತ್ಮಕ ಅಧಿಕಾರವನ್ನು ಹಸ್ತಾಂತರ ಮಾಡಿ ಆಶೀರ್ವದಿಸಿದುದು ಶ್ರೀಮಠದಲ್ಲಿ ನಡೆದ ಪ್ರಮುಖ ಐತಿಹಾಸಿಕ ಘಟನೆಗಳಲ್ಲಿ ಒಂದು. ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಶ್ರೀಮಠದ ಉತ್ತರಾಧಿಕಾರಿಯಾಗಿ ಅಧಿಕಾರ ಸ್ವೀಕಾರ ಮಾಡಿ ೨೩ ವರ್ಷಗಳಾಯಿತು. ಅಂದಿನಿಂದ ಇಂದಿನವರಿಗೂ ನಮ್ಮ ಗುರುಗಳ ದಿವ್ಯ ಮಾರ್ಗದರ್ಶನ, ಆಶೀರ್ವಾದದಿಂದ ಶ್ರೀಮಠದ ಸಮಸ್ತ ಕಾರ್ಯ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದರ ಜೊತೆಗೆ ಸಾಧನೆಯಿಂದ ಆಧ್ಯಾತ್ಮದ ಮೆಟ್ಟಿಲುಗಳನ್ನೇರಿ ಗುರುಗಳ ಪ್ರೀತಿ, ಮೆಚ್ಚುಗೆಗೆ ಪಾತ್ರರಾದರು. ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರಿಗೆ ಶ್ರೀಮಠದ ಸಮಸ್ತ ಜವಾಬ್ದಾರಿ ಯನ್ನು ವಹಿಸಿದರೆ ಧೈರ್ಯದಿಂದ ಮುನ್ನಡೆಸುವರೆಂಬ ಅಚಲ ವಿಶ್ವಾಸ ನಂಬಿಕೆಯಿಂದ ತಮ್ಮ ಕಾರುಣ್ಯಶಿಶುವಿಗೆ ಅಧಿಕಾರವನ್ನು ಹಸ್ತಾಂತರ ಮಾಡಿ, ಮಠಾಧ್ಯಕ್ಷರನ್ನಾಗಿ ಮಾಡಿ ಆಶೀರ್ವದಿಸಿದರು. (ಪೂಜ್ಯ ಶ್ರೀ ಶ್ರೀಗಳವರ ಪತ್ರಿಕಾ ಪ್ರಕಟನೆಯನ್ನು ಪ್ರತ್ಯೇಕವಾಗಿ ಕೊಡಲಾಗಿದೆ)

ಅಧಿಕಾರವನ್ನು ಸ್ವೀಕರಿಸಿ ಭಾವಪರವಶರಾಗಿ ಮಾತ ನಾಡಿದ ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳವರು 'ತಮ್ಮ ಗುರುವರ್ಯರು ಬಿಸಿಲು, ಮಳೆ, ಬಿರುಗಾಳಿ ನಡುವೆ ಶ್ರೀಮಠವನ್ನು ಬಲಿಷ್ಠವಾಗಿ ಕಟ್ಟಿ ಬೆಳೆಸಿದ್ದಾರೆ. ನನಗೆ ಮಠದ ಭೌತಿಕ ಆಸ್ತಿಗಳಿಗಿಂತ ಪಾರಮಾರ್ಥಿಕ ಸಂಪತ್ತು ಬಹಳ ಮುಖ್ಯ. ಗುರುಗಳ ಆಧ್ಯಾತ್ಮಿಕ ಸಂಪತ್ತಿಗೆ ಉತ್ತರಾಧಿಕಾರಿ ಯಾಗುವ ಅರ್ಹತೆಯನ್ನು ಗಳಿಸುವುದು ನನ್ನ ಗುರಿಯಾಗಿದೆ. ನನಗೆ ಶ್ರೀಗುರುಗಳ ಕೃಪಾಶೀರ್ವಾದಕ್ಕಿಂತ ಯಾವುದೂ ದೊಡ್ಡದಲ್ಲ' ಎಂದು ಹೇಳುತ್ತಲೇ ಗದ್ಗದಿತರಾಗಿ ಕಣ್ಣೀರು ಸುರಿಸಿದರು.

ಅವರು ತಮ್ಮ ನುಡಿನಮನದಲ್ಲಿ 'ಇಷ್ಟು ದಿನ ಗುರುಗಳು ಹೇಳಿದ ಕೆಲಸ ಮಾಡುತ್ತಿದ್ದೆ. ಆದರೆ ಆಧ್ಯಾತ್ಮಿಕ ಸಾಧನೆ ಅಂದುಕೊಂಡ ಮಟ್ಟಕ್ಕೆ ಆಗಲಿಲ್ಲ. ಇನ್ನು ಮುಂದೆ ಈ ಬಗ್ಗೆ ಗಂಭೀರ ಪ್ರಯತ್ನ ಮಾಡುತ್ತೇನೆ. ಗುರುಗಳು ಹಾಕಿದ ಗೆರೆಯನ್ನು ದಾಟಿಲ್ಲ. ಇನ್ನು ಮುಂದೆಯೂ ದಾಟುವುದಿಲ್ಲ. ನನ್ನ ಪೂಜ್ಯ ಗುರುಗಳು ಕಣ್ಣಿಗೆ ಕಾಣುವ ಮಹಾನುಭಾವರು. ಅಂಥವರು ಸವೆಸಿದ ಹಾದಿಯಲ್ಲಿ ನಡೆಯುವುದೇ ನನ್ನ ಪುಣ್ಯ. ಗುರುಗಳ ಹಾದಿಯಲ್ಲಿ ಎರಡು ಹೆಜ್ಜೆ ಇಟ್ಟರೂ ಅತೀವ ಸಂತೋಷವಾಗುತ್ತದೆ; ತೃಪ್ತಿ ದೊರೆಯುತ್ತದೆ. ಗುರುಗಳ ಸೇವೆಗೆ ಇನ್ನು ಮುಂದೆ ಹೆಚ್ಚು ಗಮನ ನೀಡುತ್ತೇನೆ. ಇಲ್ಲಿಯವರೆಗೂ ಅವರ ಸೇವೆ ಮಾಡಲಾಗಲಿಲ್ಲ ಎಂಬ ಕೊರಗು ನನ್ನನ್ನು ಸದಾ ಕಾಡುತ್ತದೆ' ಎಂದು ನೊಂದು ನುಡಿದರು.

ಸಮಾರಂಭದಲ್ಲಿ ಬೇಲಿಮಠದ ಶ್ರೀ ಶ್ರೀ ಶಿವರುದ್ರ ಸ್ವಾಮೀಜಿ, ಹಿರೇಮಠದ ಅಧ್ಯಕ್ಷರಾದ ಡಾ॥ ಶ್ರೀ ಶ್ರೀ ಶಿವಾನಂದ ಶಿವಾಚಾರ್ಯ ಸ್ವಾಮೀಜಿ, ಕನಕಪುರ ಶ್ರೀ ದೇಗುಲ ಮಠಾಧ್ಯಕ್ಷರಾದ ಮಮ್ಮುಡಿ ನಿರ್ವಾಣಸ್ವಾಮಿಗಳು, ಶಿವಗಂಗೆ ಮೇಲಣಗವಿ ಮಠದ ಶ್ರೀ ಶ್ರೀ ಶಾಂತಮುನಿ ಶಿವಾಚಾರ್ಯ ಸ್ವಾಮೀಜಿ, ಕುಪ್ಪೂರು ಗದ್ದಿಗೆಮಠದ ಡಾ॥ ಶ್ರೀ ಶ್ರೀ ಯತೀಶ್ವರ ಶಿವಾಚಾರ್ಯ ಸ್ವಾಮೀಜಿ, ವಿಭೂತಿಪುರ ಮಠದ ಶ್ರೀಗಳು ಸೇರಿದಂತೆ ನಾಡಿನ ವಿವಿಧ ಮಠಾಧಿಪತಿಗಳು, ನಿವೃತ್ತ ನ್ಯಾಯಮೂರ್ತಿ ಶ್ರೀ ಮಳಿಮಠ, ಜಿಲ್ಲಾಧಿಕಾರಿ ಡಾ॥ ಸಿ. ಸೋಮಶೇಖರ್, ಹಿರಿಯ ಕವಿ, ವಿದ್ವಾಂಸರಾದ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ, ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿ ಶ್ರೀ ಟಿ.ಆರ್. ಸುರೇಶ್, ಶ್ರೀ ಬಿ.ಬಿ. ಶಿವಪ್ಪ, ಡಾ॥ ಶಿವಪ್ಪ, ಶ್ರೀ ಬಿ.ಎಸ್. ಪರಮಶಿವಯ್ಯ ಸೇರಿದಂತೆ ಅನೇಕ ಗಣ್ಯರು ಸಮಾರಂಭಕ್ಕೆ ಸಾಕ್ಷಿಯಾಗಿದ್ದರು.





# ಪತ್ರಿಕಾ ಪ್ರಕಟಣೆ

**ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು, ಶ್ರೀ ಸಿದ್ಧಗಂಗಾ ಮಠ ಇವರು ನೀಡಿದ ಪತ್ರಿಕಾ ಪ್ರಕಟಣೆ**

ನಮ್ಮ ಪೂಜ್ಯಗುರುಗಳಾದ ಶ್ರೀ.ಮ.ಪ್ರಸ್ವ. ಶ್ರೀ ಉದ್ಧಾನ ಶಿವಯೋಗಿಗಳವರು ದಿನಾಂಕ ೦೩-೦೩-೧೯೩೦ರಂದು ನಮಗೆ ವಿರಕ್ತಾಶ್ರಮವನ್ನು ಅನುಗ್ರಹಿಸಿ ಅವರ ಉತ್ತರಾಧಿಕಾರಿಯಾಗಿ ನೇಮಿಸಿಕೊಂಡು ನಂತರ ಅವರು ೧೯೪೧ ರಲ್ಲಿ ಲಿಂಗೈಕ್ಯರಾದಾಗ ನಾವು ಶ್ರೀಮಠದ ಮಠಾಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡು ಅಂದಿನಿಂದ ಇಲ್ಲಿಯವರೆವಿಗೂ ಶ್ರೀಮಠದ ಮಠಾಧ್ಯಕ್ಷರಾಗಿ ಶ್ರೀಮಠವನ್ನು ಬೆಳೆಸಿ ನಡೆಸಿಕೊಂಡು ಬಂದಿರುವುದು ಎಲ್ಲರಿಗೂ ತಿಳಿದಿರುವ ವಿಚಾರ. ನಮ್ಮ ಸತತ ಕಾಯಕ ಮತ್ತು ದಾಸೋಹದಿಂದ ಶ್ರೀಮಠವು ಇಂದು ಬೃಹದಾಕಾರವಾಗಿ ಬೆಳೆದು ಸಾರ್ವಜನಿಕ ಸೇವೆ ಯಲ್ಲಿ ಮತ್ತು ಸಾವಿರಾರು ಮಕ್ಕಳ ಉಚಿತ ವಿದ್ಯಾಭ್ಯಾಸ ಮತ್ತು ಅವರ ಏಳಿಗೆಗೆ ಕಾರಣವಾಗಿರುವುದು ಎಲ್ಲರಿಗೂ ತಿಳಿದ ವಿಷಯ. ಇಡೀ ಭರತ ಖಂಡದಲ್ಲಿ ಇದು ಒಂದು ವಿಶಿಷ್ಟವಾದ ಜಾತಿ ಮತ ಭೇದವಿಲ್ಲದೆ ಎಲ್ಲ ವರ್ಗಗಳ ಏಳಿಗೆಗೆ ಶ್ರಮಿಸುತ್ತಿರುವುದು ಏಕೈಕ ಸಂಸ್ಥೆಯಾಗಿ ಪ್ರಖ್ಯಾತಿ ಪಡೆದಿರುವುದು ಎಲ್ಲರಿಗೂ ತಿಳಿದ ವಿಷಯ.

೧೯೭೫ರಲ್ಲಿ ಸೀತಕಲ್ ಗ್ರಾಮದ ಶ್ರೀ ಜಗದೀಶ್ ರವರನ್ನು ನಮ್ಮ ಉತ್ತರಾಧಿಕಾರಿಯಾಗಿ ಮಾಡಿಕೊಳ್ಳುವ ಉದ್ದೇಶದಿಂದ ಅವರಿಗೆ ಚರಜಂಗಮ ಪಟ್ಟಾಧಿಕಾರ ಕೊಟ್ಟು ವಿರಕ್ತಾಶ್ರಮವನ್ನು ನೀಡಿ ಶ್ರೀ ಗೌರಿಶಂಕರಸ್ವಾಮಿಗಳೆಂದು ನಾಮಕರಣ ಮಾಡಿ ಅವರನ್ನು ನಮ್ಮ ಉತ್ತರಾಧಿಕಾರಿಯಾಗಿ ನೇಮಕ ಮಾಡಿಕೊಂಡೆವು. ಸದರಿ ಶ್ರೀ ಗೌರಿಶಂಕರಸ್ವಾಮಿ ಗಳು ಶ್ರೀಮಠದ ಪರಂಪರೆಗೆ ಅನುಗುಣವಾಗಿ ನಡೆದುಕೊಳ್ಳದೇ ಇದ್ದ ಕಾರಣ, ದಿನಾಂಕ ೩೧-೦೩-೧೯೮೮ ರಂದು ನಮ್ಮ ಆದೇಶ ಸಂಖ್ಯೆ ಎಸ್.ಎಂ. ೧೩೩೮:೮೭-೮೮ರ ಪ್ರಕಾರ ಅದರಲ್ಲಿ ವಿವರಿಸಿರುವ ಕಾರಣಗಳಿಗಾಗಿ ಅವರನ್ನು ನಮ್ಮ ಉತ್ತರಾಧಿಕಾರಿ ಸ್ಥಾನದಿಂದ ತೆಗೆದುಹಾಕಿ, ಅದೇ ದಿನ ನಮ್ಮ ಉತ್ತರಾಧಿಕಾರಿ ಸ್ಥಾನಕ್ಕೆ ಅಂದೇ ಹರಗುರು ಚರಮೂರ್ತಿಗಳ ಸಮ್ಮುಖದಲ್ಲಿ ನಮ್ಮಿಂದ ಈ ಹಿಂದೆಯೇ ೨೯-೦೧-೧೯೮೮ರಂದು ಷಟ್ಸ್ಥಲ ಬ್ರಹ್ಮೋಪದೇಶ ಪೂರ್ವಕ ನಿರಾಭಾರಿ ಜಂಗಮಪಟ್ಟಾಧಿ ಕಾರವನ್ನು ಪಡೆದು ವಿರಕ್ತಾಶ್ರಮವನ್ನು ಸ್ವೀಕರಿಸಿದ್ದ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳನ್ನು ನಮ್ಮ ಉತ್ತರಾಧಿಕಾರಿಯಾಗಿ ನೇಮಕ ಮಾಡಿಕೊಂಡಿರುತ್ತೇವೆ. ಅವರು ಅಂದಿನಿಂದ ಇಂದಿನವರೆವಿಗೂ ನಮ್ಮ ಉತ್ತರಾಧಿಕಾರಿಯಾಗಿ ಶ್ರೀಮಠದ ಪರಂಪರೆಗೆ ಅನುಗುಣವಾಗಿ ನಮ್ಮ ಆಜ್ಞಾನುಸಾರ ನಡೆದು ಕೊಂಡು ಮಠದ ಕೆಲಸಕಾರ್ಯಗಳನ್ನು ನಿರ್ವಹಿಸಿಕೊಂಡು ಸದಾಚಾರದಿಂದ, ಗುರುನಿಷ್ಠೆಯಿಂದ, ಪೂಜಾನಿಷ್ಠೆಯನ್ನು ಬೆಳೆಸಿಕೊಂಡು ಬಂದಿರುತ್ತಾರೆ.

ಶ್ರೀ ಸಿದ್ಧಲಿಂಗಸ್ವಾಮಿಗಳವರು ನಮ್ಮ ಉತ್ತರಾಧಿಕಾರಿ ಯಾಗಿ ನೇಮಕಗೊಂಡ ನಂತರ ಶ್ರೀಮಠದಲ್ಲಿ ಶ್ರದ್ಧೆಯಿಂದ ವಚನಶಾಸ್ತ್ರ, ವೀರಶೈವದರ್ಶನಶಾಸ್ತ್ರಗಳನ್ನು ಅಧ್ಯಯನ ಮಾಡಿ ಹಾಗೂ ಹೆಚ್ಚಿನ ವಿದ್ಯಾಭ್ಯಾಸವನ್ನು ಮಾಡಿ ಶ್ರೀಮಠದ ದಾಸೋಹತತ್ವ, ಸಮಾಜಸೇವಾ ಕೈಂಕರ್ಯಗಳನ್ನು ನಡೆಸಿಕೊಂಡು ಬಂದು, ನೈಷ್ಠಿಕಬ್ರಹ್ಮಚರ್ಯ ಪರಿ ಪಾಲನೆ ಮಾಡಿಕೊಂಡು ಶ್ರೀಮಠದಲ್ಲಿ ಅಪಾರವಾದ ವಿದ್ಯಾರ್ಥಿಗಳಲ್ಲಿ ಪ್ರೀತಿವಾತ್ಸಲ್ಯ ಭಾವನೆ, ಹಳೆಯ ವಿದ್ಯಾರ್ಥಿಗಳಲ್ಲಿ ಗೌರವ ಭಾವನೆ, ಗ್ರಾಮೀಣ ಬಂಧುಗಳಲ್ಲಿ ಗೌರವ ಮನೋಭಾವನೆ ಬೆಳೆಸಿಕೊಂಡು ಬಂದು ಶ್ರೀಮಠದ ಪವಿತ್ರ ಪರಂಪರೆಯನ್ನು ಮುಂದುವರೆಸಿಕೊಂಡು ಬಂದು ಚಾರಿತ್ರ್ಯ ಸಂಪನ್ನರಾಗಿ ರೂಪುಗೊಂಡಿರುವುದನ್ನು ನಾವು ಸ್ವತಃ ಗಮನಿಸಿದ್ದೇವೆ. ಅಲ್ಲದೆ ಪೂಜಾನಿಷ್ಠೆಯನ್ನು ಬೆಳೆಸಿ ಕೊಡು ಆತ್ಮೀಯ ಸಂಪತ್ತನ್ನು ಬೆಳೆಸಿಕೊಂಡು ಸಮಾಜದ ಬಾಂಧವರಿಗೆ ನೀಡುವ ಶಕ್ತಿಸಂಪನ್ನರಾಗಿದ್ದಾರೆ ಎನ್ನುವುದನ್ನು ನಾವು ಮನಗಂಡು ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳಿಗೆ

ಅಧಿಕಾರ ವಹಿಸಿಕೊಟ್ಟಲ್ಲಿ ಶ್ರೀಮಠದ ಶ್ರೇಯೋಭಿವೃದ್ಧಿಯನ್ನು ಚಾಚು ತಪ್ಪದೆ ನಡೆಸಿಕೊಂಡು ಶ್ರೀಮಠವನ್ನು ಮುಂದುವರೆಸಿಕೊಂಡು ಹೋಗುವುದರಲ್ಲಿ ನಾವು ದೃಢ ನಂಬಿಕೆ ಉಳ್ಳವರಾಗಿದ್ದೇವೆ.

ಶ್ರೀ ಸಿದ್ಧಗಂಗಾ ಮಠದ ಬಹುಮುಖವಾದ ಸೇವಾ ಕಾರ್ಯಗಳಲ್ಲಿ ಅಭಿವೃದ್ಧಿಗಳಲ್ಲಿ ಆಸಕ್ತಿ ವಹಿಸಿ ಶ್ರೀಮಠದಲ್ಲಿ ನಡೆಯುತ್ತಿರುವ ದಾಸೋಹ ಕಾರ್ಯ ಶಿಕ್ಷಣ ಸಂಸ್ಥೆಗಳಲ್ಲಿ ಹೆಚ್ಚಿನ ಆಸಕ್ತಿವುಳ್ಳವರಾಗಿ ಇವುಗಳನ್ನು ಇತೋಪ್ಯತಿಶಯವಾಗಿ ಬೆಳೆಸಿಕೊಂಡು ಬರುವ ದಕ್ಷತೆಯನ್ನು ನಾವು ಶ್ರೀ ಸಿದ್ಧಲಿಂಗಸ್ವಾಮಿಗಳವರಲ್ಲಿ ಕಂಡಿದ್ದೇವೆ. ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಶ್ರೀ ಸಿದ್ಧಗಂಗಾ ಮಠದ ಗುರುಪರಂಪರೆಗೆ ಚ್ಯುತಿ ಬಾರದಂತೆ ಕರ್ತವ್ಯೋನ್ಮುಖರಾಗಿ ಇನ್ನು ಮುಂದೆ ಶ್ರೀಮಠವನ್ನು ನಡೆಸಿಕೊಂಡು ಬರುವ ದೃಢ ವಿಶ್ವಾಸ ನಮಗಿದ್ದು ಇವರನ್ನು ಶ್ರೀ ಸಿದ್ಧಗಂಗಾಮಠದ ಮಠಾಧ್ಯಕ್ಷ ರಾಗಿ ನೇಮಕ ಮಾಡಿ ಅಧಿಕಾರ ವಹಿಸಿಕೊಟ್ಟಲ್ಲಿ ಶ್ರೀಮಠದ ಭವಿಷ್ಯಕ್ಕೆ ಕುಂದು ಬಾರದೆಂಬ ಸ್ಪಷ್ಟ ಅಭಿಪ್ರಾಯ ನಮಗುಂಟಾಗಿದೆ.

ಶ್ರೀ ಸಿದ್ಧಗಂಗಾಮಠದ ಕಾರ್ಯವ್ಯಾಪ್ತಿಗಳು ದಿನೇ ದಿನೇ ವಿಸ್ತಾರವಾಗುತ್ತಾ ನಡೆದಿವೆ. ವಿದ್ಯಾಸಂಸ್ಥೆಗಳು ಅಧಿಕಗೊಂಡಿವೆ. ಶ್ರೀಮಠದ ಭಕ್ತರ ಸಂಪತ್ತು ಅಪಾರವಾಗಿ ಬೆಳೆದಿದೆ. ವಿದ್ಯಾರ್ಥಿಗಳ ಸಂಖ್ಯೆ ಸಹಸ್ರಾಧಿಕವಾಗಿ ಬೆಳೆದಿದೆ. ಸಭೆ ಸಮಾರಂಭಗಳು, ಭಕ್ತರ ಮನೆಯ ಆಹ್ವಾನಗಳು ದಿನೇ ದಿನೇ ಹೆಚ್ಚಾಗುತ್ತಿವೆ. ನಮಗೆ ಈ ಎಲ್ಲಾ ಕಾರ್ಯಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು ವಯೋಧರ್ಮದಿಂದ ಸಾಧ್ಯವಾಗುತ್ತಿಲ್ಲ. ಈ ಇಳಿ ವಯಸ್ಸಿನಲ್ಲಿ ದೇಹಧರ್ಮ ಸಹಜವಾಗಿ ಕಾರ್ಯ ನಿರ್ವಹಿಸುವಲ್ಲಿ ಅಶಕ್ತವಾಗಿದೆ. ಈ ಎಲ್ಲಾ ಅಂಶಗಳನ್ನು ಮನಗಂಡು – ನಮ್ಮ ಉತ್ತರಾಧಿಕಾರಿಗಳಾಗಿರುವ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರಿಗೆ ಶ್ರೀಮಠದ ಮಠಾಧ್ಯಕ್ಷತೆಯನ್ನು ವಹಿಸಿಕೊಟ್ಟು ನಡೆಸಿಕೊಂಡು ಹೋಗಲು ಬಿಟ್ಟುಕೊಟ್ಟಲ್ಲಿ ಮಠದ ಎಲ್ಲಾ ಕೆಲಸ ಕಾರ್ಯಗಳು ಮತ್ತು ಅಭಿವೃದ್ಧಿ ಕಾರ್ಯಗಳು ಸುಗಮವಾಗಿ ನಡೆಯುತ್ತದೆಂಬ ಸದ್ಭಾವನೆ ನಮ್ಮಲ್ಲಿ ಇದೆ ಹಾಗೂ ಈ ಲೌಕಿಕ ವ್ಯವಹಾರಗಳಿಂದ ನಿವೃತ್ತಿ ಹೊಂದಿ ಆಧ್ಯಾತ್ಮಿಕ ಸಂಪತ್ತನ್ನು ಭಕ್ತಾದಿಗಳಿಗೆ ನೀಡಿ ಅವರಲ್ಲಿ ಪೂಜಾನಿಷ್ಠೆಯನ್ನು ಬೆಳೆಸಿ ಸಮಾಜಕ್ಕೆ ಯೋಗ್ಯ ಮಾರ್ಗದರ್ಶನ ಮಾಡಬೇಕೆಂಬ ಆಸಕ್ತಿಯುಳ್ಳವರಾಗಿರುತ್ತೇವೆ. ಈ ಎಲ್ಲಾ ಅಂಶಗಳನ್ನು ಮನಗಂಡು ನಮಗೆ ಈಗಾಗಲೇ ೧೦೩ ಸಂವತ್ಸರಗಳು ತುಂಬಿದ್ದು, ೧೦೪ನೇ ಸಂವತ್ಸರಗಳಲ್ಲಿ ಇರುವುದರಿಂದ ಹಾಗೂ ಕಳೆದ ೨-೩ ಮಾಸಗಳಿಂದ ಪದೇ ಪದೇ ದೇಹಾಲಸ್ಯ ಉಂಟಾಗುತ್ತಿರುವುದರಿಂದ ಮತ್ತೆ ಹೊರಗಡೆ ದೂರ ಪ್ರಯಾಣ ಮಾಡಲು ಹಾಗೂ ಭಕ್ತರ ಕೋರಿಕೆಯನ್ನು ನೆರವೇರಿಸಲು ಕಷ್ಟಕರವಾಗುತ್ತಿರುವುದರಿಂದ ಶ್ರೀಮಠದ ದೈನಂದಿನ ಕಾರ್ಯಕ್ರಮಗಳಿಗೆ ಮತ್ತು ಶ್ರೇಯೋಭಿವೃದ್ಧಿಗೆ ಕುಂದುಬಾರದಿರಲೆಂಬ ಸದುದ್ದೇಶದಿಂದ ಹರಗುರು ಚರಮೂರ್ತಿಗಳು ಮಠಾಧ್ಯಕ್ಷರುಗಳು ಹಾಗೂ ಭಕ್ತರ ಸಮ್ಮುಖದಲ್ಲಿ ಈ ದಿನ ಅಂದರೆ ಸನ್ ಎರಡು ಸಾವಿರದ ಹನ್ನೊಂದನೇ ಇಸವಿ ಆಗಸ್ಟ್ ಮಾಹೆ ದಿನಾಂಕ ನಾಲ್ಕನೇ ಗುರುವಾರದಂದು ನಮ್ಮ ಉತ್ತರಾಧಿಕಾರಿಗಳಾಗಿ ಮುಂದುವರಿದಿರುವ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರನ್ನು ಶ್ರೀ ಸಿದ್ಧಗಂಗಾಮಠದ ಘನತೆ, ಗೌರವ, ಪ್ರತಿಷ್ಠತೆಗಳಿಗೆ ಕುಂದು ಬಾರದಂತೆ ನಡೆಸಿ ಕೊಂಡು ಹೋಗಲು ಮಾರ್ಗದರ್ಶನ ನೀಡಿ ಶ್ರೀಮಠದ ಸಮಸ್ತ ಕಾರ್ಯಚಟುವಟಿಕೆಗಳನ್ನು ನಡೆಸಿಕೊಂಡು ಹೋಗಲು ಶ್ರೀ ಸಿದ್ಧಗಂಗಾ ಮಠದ ಮಠಾಧ್ಯಕ್ಷತೆಯನ್ನು ವಹಿಸಿಕೊಟ್ಟು ಅವರನ್ನು ಮಠಾಧ್ಯಕ್ಷರನ್ನಾಗಿ ನೇಮಿಸಿ ಈ ಮೂಲಕ ಆಶೀರ್ವದಿಸಿರುತ್ತೇವೆ.

(ಶ್ರೀ ಶಿವಕುಮಾರಸ್ವಾಮಿಗಳು)
ಶ್ರೀ ಸಿದ್ಧಗಂಗಾಮಠ





# ಮನುಕುಲಕ್ಕೆ ಬಸವಣ್ಣನ ಕೊಡುಗೆ

–ಡಾ॥ ಬಿ.ಎಂ. ಪಾಟೀಲ *



ಮಹಾತ್ಮಾಗಾಂಧೀಜಿಯವರು ದಿನಾಂಕ ೩೦-೦೨-೧೯೩೪ ರಂದು ಬೆಳಗಾವಿಗೆ ಆಗಮಿಸಿದ್ದರು. ಆ ಸಂದರ್ಭದಲ್ಲಿ ಶ್ರೀ ಫ.ಗು. ಹಳಕಟ್ಟಿ, ಶ್ರೀ ಸಿದ್ರಾಮಪ್ಪ ಪಾವಟೆ ಅವರುಗಳು ಬಸವತತ್ವದ ಉದಾತ್ತ ವಿಚಾರಗಳನ್ನು ಕುರಿತು ಇಂಗ್ಲೀಷಿನಲ್ಲಿ ವಿವರಿಸಿದರು. ಅವರ ಮಾತಿಗೆ ಉತ್ತರ ರೂಪವಾಗಿ ಗಾಂಧೀಜಿಯವರು ಹೇಳಿದ್ದು ಹೀಗಿದೆ

'ನಾನು ಇಲ್ಲಿಗೆ ಬರುವಾಗ ಬಸವಣ್ಣನವರ ಬೀದಿ (ಮಾರ್ಗ)ಯಲ್ಲಿ ನಡೆದು ಬಂದಿದ್ದೇನೆ. ಕರ್ನಾಟಕದಲ್ಲಿ ಲಿಂಗಾಯತರು ಕಾಂಗ್ರೆಸ್ ಸೇರದ ವಿನಾ ಕಾಂಗ್ರೆಸ್ ಪ್ರಾತಿನಿಧಿಕ ಸಂಸ್ಥೆಯಾಗುವುದಿಲ್ಲ. ಹಿಂದಿನ ಕಾಲದಲ್ಲಿ ಎಂಟುನೂರು ವರ್ಷಗಳ ಆಚೆಕಡೆ ಬಸವೇಶ್ವರರು ಯಾವ ತತ್ವ ಆಚರಿಸಿ ಉಪದೇಶ ಮಾಡಿದರೊ ಅಷ್ಟೆಲ್ಲಾ ತತ್ವ ನನಗೆ ಆಚರಿಸಲಿಕ್ಕೆ ಆಗುವುದಿಲ್ಲ. ಅದರಲ್ಲಿ ಕೆಲವು ತತ್ತ್ವಗಳನ್ನು ನಾನು ಆಚರಿಸುತ್ತಲಿದ್ದೇನೆ. ಸಾಧಕ ಸ್ಥಿತಿಯಲ್ಲಿದ್ದೇನೆ; ಸಿದ್ಧನಲ್ಲ. ಆದರೆ ಬಸವಣ್ಣನವರು ಹೇಳಿದ ತತ್ತ್ವಗಳೆಲ್ಲಾ ಆಚರಣೆಯಲ್ಲಿ ತಂದಿದ್ದರು. ಅದರಲ್ಲಿ ಅಸ್ಪೃಶ್ಯತಾ ನಿವಾರಣೆ, ಕಾಯಕತತ್ತ್ವ ಬಹುಮುಖ್ಯವಾದವು. ಜಾತಿಭೇದ ಯಾವ ತರಹದವೂ ಅವರಲ್ಲಿ ಕಂಡು ಬರುವುದಿಲ್ಲ. ಈ ಕಾಲದಲ್ಲಿ ಅವರು ಇರುತ್ತಿದ್ದರೆ ಜಗತ್ತಿಗೆ ಪೂಜ್ಯ ವ್ಯಕ್ತಿಯಾಗಿ ಪರಿಣಮಿಸುತ್ತಿದ್ದರು. ಆ ಧರ್ಮಾನುಯಾಯಿಗಳಾದ ನೀವು ಅವರು ಉಪದೇಶಿಸಿದ ತತ್ತ್ವಗಳನ್ನು ಆಚರಣೆಯಲ್ಲಿ ತಂದರೆ ಭಾರತ ಭೂಮಿಯನ್ನಷ್ಟೇ ಏಕೆ ಜಗತ್ತನ್ನೇ ಉದ್ಧಾರ ಮಾಡಬಲ್ಲಿರಿ. ನನಗೆ ಕನ್ನಡ ಭಾಷೆ ಬರುವುದಿಲ್ಲ. ನನಗೆ ಆಗ ಪೂರ್ಣ ತತ್ತ್ವವನ್ನು ತಿಳಿಸಿದರೆ ನಾನು ನಿಮಗೆ ಆಭಾರಿಯಾಗಿರುವೆ. ತಾವು ಈ ಮೂಲಕ ಅವುಗಳ ವ್ಯಾಪ್ತಿಯನ್ನು ಹೇಳದೆ ಹೋಗಿದ್ದರೆ ನಮ್ಮೆಲ್ಲರಿಗೂ ಸರಿಯಾದ ಕಲ್ಪನೆ ಬರುತ್ತಿರಲಿಲ್ಲ. ಬಸವ ತತ್ತ್ವಾನುಯಾಯಿಗಳಾದ ನಿಮಗೆ ಹೆಚ್ಚಾಗಿ ಏನೂ ಹೇಳಲಾರೆ'.

೧೨ನೇ ಶತಮಾನದಲ್ಲಿ ಬಾಳಿ ಹೋದ ಬಸವಣ್ಣನ ವ್ಯಕ್ತಿತ್ವ ಬಹುಮುಖವಾದದ್ದು. ಇಂಥ ಮಹಾನ್ ಸಾಧಕನೊಬ್ಬ ಮರ್ತ್ಯಲೋಕದಲ್ಲಿ ಹುಟ್ಟುವುದು ಅತ್ಯಂತ ದುರ್ಲಭ. ದಾರ್ಶನಿಕ, ವಿಭೂತಿ ಪುರುಷ, ಕಾರಣಿಕ ಪುರುಷ, ತತ್ತ್ವಜ್ಞಾನಿ, ಅನುಭಾವಿ, ಭಕ್ತಿಭಂಡಾರಿ, ಯುಗಪುರುಷ, ಜ್ಞಾನಯೋಗಿ, ಸಂಸಾರಯೋಗಿ, ಕರ್ಮಯೋಗಿ, ಪವಾಡ ಪುರುಷ, ಸಮತಾವಾದಿ, ಮಾನವತಾವಾದಿ, ತ್ಯಾಗಜೀವಿ ಅಹಿಂಸಾವಾದಿ, ಧರ್ಮಪ್ರವಾದಿ, ದಲಿತಬಂಧು, ವಿಶ್ವಪ್ರೇಮಿ, ಸಮಾಜ ಸಂಘಟಕ, ಅರ್ಥಶಾಸ್ತ್ರಜ್ಞ, ನೀತಿ ಶಾಸ್ತ್ರಜ್ಞ, ಭವರೋಗ ವೈದ್ಯ ಹೀಗೆ ಹತ್ತು ಹಲವು ವೈಶಿಷ್ಟ್ಯಗಳನ್ನು ಹೊಂದಿದ ಬಹು ಅದ್ಭುತ ವ್ಯಕ್ತಿಯಾಗಿದ್ದರು ಬಸವಣ್ಣ. ಅವರವರ ಭಾವ, ಭಕ್ತಿ, ದೃಷ್ಟಿಗೆ ತಕ್ಕಂತೆ, ಜಗದಗಲ, ಮುಗಿಲಗಲ, ಅಗಮ್ಯ ಅಗೋಚರ, ಅಪ್ರತಿಮವಾಗಿ ಗೋಚರಿಸುವ ಭವ್ಯವಾದ ನಿಲವು ಬಸವಣ್ಣನವರದು. ಒಟ್ಟಿನಲ್ಲಿ ಬಸವಣ್ಣನವರ ವ್ಯಕ್ತಿತ್ವದಲ್ಲಿ ಏನಿದೆ ಎಂಬ ಪ್ರಶ್ನೆಗೆ ಏನಿಲ್ಲ? ಎಂಬ ಮರುಪ್ರಶ್ನೆಯೇ ಉತ್ತರವಾಗುತ್ತದೆ.

*ಕಾಲಿಲ್ಲದವಂಗೆ ಕಾಲು ಕೊಟ್ಟೆ ಬಸವಾ*
*ಕಣ್ಣಿಲ್ಲದವಂಗೆ ಕಣ್ಣು ಕೊಟ್ಟೆ ಬಸವಾ*
*ಎನ್ನ ಕಣ್ಣು ಕಾಲಿಂಗೆ ನೀನೆಯಯ್ಯಾ ಬಸವಾ*

* ಪ್ರಾಚಾರ್ಯರು, ಕೆ.ಎಲ್.ಇ. ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ, ಮಹಾಲಿಂಗಪುರ, ಬಾಗಲಕೋಟೆ ಜಿಲ್ಲೆ.

*ಕಪಿಲಸಿದ್ಧಮಲ್ಲಿನಾಥಯ್ಯ* —ಸಿದ್ಧರಾಮ

*ಎತ್ತೆತ್ತ ನೋಡಿದರೆ ಅತ್ತತ್ತ ಬಸವನೆಂಬ ಬಳ್ಳಿ*
*ಎತ್ತಿ ನೋಡಿದರೆ ಲಿಂಗವೆಂಬ ಗೊಂಚಲು*
*ಒತ್ತಿ ಹಿಂಡಿದೊಡೆ ಭಕ್ತಿ ಎಂಬ ರಸವಯ್ಯಾ*
—ಮಡಿವಾಳ ಮಾಚಯ್ಯ

*ರುದ್ರಲೋಕವ ಮರ್ತ್ಯಲೋಕಕ್ಕೆ ತಂದಾತ ಬಸವಣ್ಣ*
*ಶಿವಾಚಾರವ ಘನವ ಮೆರೆದಾತ ಬಸವಣ್ಣ*
—ಚೆನ್ನಬಸವಣ್ಣ

*ದೇವಲೋಕದವರಿಗೂ ಬಸವಣ್ಣನೇ ದೇವರು*
*ಮರ್ತ್ಯಲೋಕದವರಿಗೂ ಬಸವಣ್ಣನೇ ದೇವರು*
*ಮೇರುಗಿರಿ ಮಂದರಗಿರಿ ಮೊದಲಾದವಕ್ಕೆಲ್ಲಾ*
*ಬಸವಣ್ಣನೇ ದೇವರು ಮಲ್ಲಿಕಾರ್ಜುನಯ್ಯ*
*ನಿಮಗೂ ಎನಗೂ ನಿಮ್ಮ ಶರಣರಿಗೂ ಬಸವಣ್ಣನೇ*
*ದೇವರು* —ಅಕ್ಕಮಹಾದೇವಿ

*ಎನಗೆ ಲಿಂಗವು ನೀವೇ ಬಸವಯ್ಯಾ*
*ಎನಗೆ ಸಂಗವು ನೀವೇ ಬಸವಯ್ಯಾ*
*ಎನಗೆ ಪ್ರಾಣವು ನೀವೆ ಬಸವಯ್ಯಾ*
—ನೀಲಾಂಬಿಕೆ

*ಬಸವಣ್ಣಾ ನೀವು ಮರ್ತ್ಯಕ್ಕೆ ಬಂದು ನಿಂದಡೆ*
*ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲಾ ಪಸರಿಸಿತಲ್ಲಾ*
—ಅಕ್ಕನಾಗಮ್ಮ

*ಬಸವಣ್ಣ ನಿನ್ನ ಭವ ಕೇಳಿ ಎನ್ನ ಭವ ನಾಸ್ತಿಯಾಯಿತ್ತು*
*ನಮ್ಮ ಗುಹೇಶ್ವರ ಲಿಂಗದಲ್ಲಿ ನೀನು ಅಜಾತನೆಂಬುದ*
*ಲೇಸೆಮಾಡಿ*
*ಭವಪಾಶಂಗಳ ಹರಿದಿಪ್ಪೆಯಾಗಿ ನಿನ್ನ ಸಂಗದಲಾಸು*
*ಬದುಕಿದೆನು* —ಅಲ್ಲಮಪ್ರಭು

ಹೀಗೆ ಸಮಕಾಲೀನ ಶರಣರು ಬಸವಣ್ಣನವರ ಸಾಧನೆ ಹಾಗೂ ವ್ಯಕ್ತಿತ್ವವನ್ನು ಮುಕ್ತಕಂಠದಿಂದ ಶ್ಲಾಘಿಸಿದ್ದಾರೆ.

ಅನೇಕರು ಬಣ್ಣಿಸಿದ ಹಾಗೆ ಬಸವಣ್ಣನವರು ಅವತಾರಿ ಪುರುಷರಲ್ಲ. ಅವರು ಆಕಾಶದಿಂದ ಭೂಲೋಕಕ್ಕೆ ಧುತ್ತನೆ ಬಂದವರಲ್ಲ. ವಿಜಾಪುರ ಜಿಲ್ಲೆಯ ಬಸವನಬಾಗೇವಾಡಿ ಬಸವಣ್ಣನವರ ಜನ್ಮಸ್ಥಳ. ತಂದೆ ಮಾದರಸ, ತಾಯಿ ಮಾದಲಾಂಬಿಕೆ. ಬಸವಣ್ಣನವರಿಗೆ ಗಂಗಾಂಬಿಕೆ, ನೀಲಾಂಬಿಕೆ ಎಂಬ ಇಬ್ಬರು ಹೆಂಡಂದಿರು. ನಾಗಲಾಂಬಿಕೆ ಒಬ್ಬ ಸಹೋದರಿ. ಚೆನ್ನಬಸವಣ್ಣ ಸಹೋದರಳಿಯ ತರ್ದೆವಾಡಿಯ ಮಂಗಳವಾಡದಲ್ಲಿ ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಯಾಗಿದ್ದ ಸಿದ್ದಣ್ಣನು ಬಲದೇವ ಮಂತ್ರಿಯ ತಮ್ಮನು. ಬಸವಣ್ಣನವರ ತಾಯಿ ಮಾದಲಾಂಬಿಕೆಯ ಸಹೋದರ. ಬಸವಣ್ಣ ಬಿಜ್ಜಳನ ಆಸ್ಥಾನದಲ್ಲಿ ಭಂಡಾರ ಮಂತ್ರಿ. ಅರ್ಜುನ ವಾಡ ಶಾಸನ ಪ್ರಕಾರ ಕ್ರಿ.ಶ. ೧೧೪೫ರಿಂದ ೧೧೬೭ರ ಅವಧಿಯಲ್ಲಿ ಬಸವಣ್ಣನವರು ಜೀವಿಸಿದ್ದರು. ಹೀಗಾಗಿ ಬಸವಣ್ಣನವರಿಗೆ ಒಂದು ಚಾರಿತ್ರಿಕ ಹಿನ್ನಲೆ ಇದೆ. ಇದನ್ನು ಬಹುಜನರು ಗಮನಿಸದೆ ಅವರೊಬ್ಬ ದೈವೀಪುರುಷ, ಪುರಾಣ ಪುರುಷ ಎಂದು ವಾದಿಸುವು ದುಂಟು. ಇದೊಂದು ಅಜ್ಞಾನದ ಸಂಕೇತ !.

ಬಸವಣ್ಣನವರು ಮನುಕುಲಕ್ಕೆ ನೀಡಿದ ಕೊಡುಗೆ ಅಪಾರವಾದದ್ದು. ಅವುಗಳಲ್ಲಿ ಮುಖ್ಯವಾದವುಗಳನ್ನು ಮಾತ್ರ ಪ್ರಸ್ತುತದಲ್ಲಿ ದಾಖಲಿಸಲಾಗಿದೆ.

೧. ವಚನ ರಚನೆ : ವಚನ ಸಾಹಿತ್ಯ ವಿಶ್ವಮಾನ್ಯವಾದದ್ದು. ನಡೆ–ನುಡಿಯ ಸಿದ್ಧಾಂತದ ಮೌಲ್ಯವುಳ್ಳ ವಚನಗಳು ಆತ್ಮ ಸಾಕ್ಷಿಯ ಮಾತುಗಳು. ೧೨ನೇ ಶತಮಾನದಲ್ಲಿ ಪ್ರಾರಂಭ ಗೊಂಡ ವಚನ ಸಾಹಿತ್ಯ ಅನೇಕ ಕಾಲಘಟ್ಟಗಳಲ್ಲಿ ಪ್ರವಹಿಸಿ ಆಧುನಿಕ ಯುಗಗಳಲ್ಲಿಯೂ ಸಮೃದ್ಧವಾಗಿ ಬೆಳೆದು ಬರುತ್ತಿರುವುದು ಹೆಮ್ಮೆಯ ಸಂಗತಿ.

*ತಾಳಮಾನ ಸರಿಸಮನರಿಯೆ*
*ಬಜೆ ಬಜಾವಣೆಯ ಲೆಕ್ಕವನರಿಯೆ*
*ಅಮೃತಗಣ ದೇವಗಣವನರಿಯೆ*
*ಕೂಡಲಸಂಗಮದೇವಾ, ನಿನಗೆ ಕೇಡಿಲ್ಲವಾಗಿ*
*ಅನು ಒಲಿದಂತೆ ಹಾಡುವೆ*

ಅನು ಒಲಿದಂತೆ ಹಾಡುವೆ ಎಂಬ ಬಸವಣ್ಣನವರ ಮಾತು ಇಂದಿನ ಬಂಡಾಯ ಸಾಹಿತ್ಯವನ್ನು ನೆನಪಿಸುವಂತಿದೆ.

ಸಾಹಿತ್ಯ ಕ್ಷೇತ್ರದಲ್ಲಿ ವಚನ ಯುಗ ಒಂದು ಅಪೂರ್ವ ವಾದ ಬದಲಾವಣೆ. ಸರಳ, ಅರ್ಥಪೂರ್ಣ, ಮುಕ್ತವಾದ, ಅನುಭಾವದ ವಚನಗಳ ರಚನೆ ಒಂದು ಸಾಮೂಹಿಕ ಸೃಷ್ಟಿ. ಸಾವಿರದಾ ಐನೂರಪ್ಪು ವಚನಗಳನ್ನು ಬಸವಣ್ಣ ನವರು ಬರೆದಿದ್ದಾರೆ. ಈ ವಚನಗಳ ವಿಷಯಾನುಸಾರ





ವಾಗಿ ವರ್ಗೀಕರಿಸಿ, ವಿವಿಧ ದೃಷ್ಟಿಯಿಂದ ಅಭ್ಯಸಿಸುತ್ತ ಬಂದಿದ್ದಾರೆ. ಕನ್ನಡದಲ್ಲಿ ಬಸವಣ್ಣನವರ ವ್ಯಕ್ತಿತ್ವ ವಚನಗಳ ಕುರಿತಾಗಿ ಲೇಖನ ಹಾಗೂ ಗ್ರಂಥಗಳು ಪ್ರಕಟಗೊಂಡಷ್ಟು ಇನ್ನಾರ ಬಗೆಯೂ ಪ್ರಕಟಗೊಂಡಿಲ್ಲ ಎಂದರೆ ಆಶ್ಚರ್ಯವಲ್ಲ.

೨. ಸರಳ ಜೀವನ : ಸರಳತೆ ಶರಣ ಜೀವನದ ಪ್ರಥಮ ಆದ್ಯತೆ. ನಡೆ–ನುಡಿಗಳಲ್ಲಿ ಆಚಾರ–ವಿಚಾರಗಳಲ್ಲಿ ಸರಳತೆಗೆ ಬಸವಣ್ಣನವರು ತುಂಬ ಮಹತ್ವ ನೀಡಿದ್ದಾರೆ. ಸರಳತೆ ಪ್ರಾಮಾಣಿಕ ವ್ಯಕ್ತಿಯ ಮೊದಲ ಲಕ್ಷಣವಾಗಿದೆ. ದುಂದು ವೆಚ್ಚ ದುಃಖಕ್ಕೆ ಕಾರಣವಾಗಿದೆ.

*ಘನೆ ನೋಡಾ ಬಡವರು, ಮನ ನೋಡಾ ಘನ*

.................................................................

*ಸೋಂಕಿನಲಿ ಸುಖ ಸರ್ವಾಂಗ ಕಲಿಗಳು*

ಪ್ರಸ್ತುತ ಬಸವಣ್ಣನವರು ಆತ್ಮೋದ್ಧಾರ ಮಾರ್ಗವನ್ನು ಅತ್ಯಂತ ಸರಳವಾದ ರೀತಿಯಲ್ಲಿ ತೋರಿಸಿದ್ದಾರೆ. ಆತ್ಮಜ್ಞಾನ ಸಾಕ್ಷಾತ್ಕಾರವಾಗಲು ಉಗ್ರೋಗ್ರವಾಗಿ ದೇಹ ದಂಡಿಸಬೇಕಿಲ್ಲ. ನಡೆ–ನುಡಿ ಆಚಾರ–ವಿಚಾರಗಳಲ್ಲಿ ಸೌಜನ್ಯ ಅಳವಡಿಸಿ ಕೊಂಡರೆ ಸಾಕು ಎಲ್ಲರಿಗೂ ಆತ್ಮಜ್ಞಾನ ಸಾಧ್ಯ.

*ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ*
*ರುದ್ರಪದವಿಯನೊಲ್ಲೆ*
*ಮತ್ತಾವ ಪದವಿಯನೊಲ್ಲೆಯಯ್ಯಾ*
*ಕೂಡಲಸಂಗಮದೇವಾ ನಿಮ್ಮ ಸದ್ಭಕ್ತರ*
*ಪಾದವನರಿದಿಪ್ಪ ಮಹಾಪದವಿಯನೆ ಕರುಣಿಸಯ್ಯಾ*

ದೇವ–ದೇವಾದಿಗಳ ಪದವಿ, ಅಂತಸ್ತು, ವೈಭವ, ವಿಲಾಸದ ಸುಖ ಸಾಮ್ರಾಜ್ಯವನ್ನು ಬಸವಣ್ಣನವರು ತಿರಸ್ಕರಿಸುತ್ತಾರೆ. ಸದ್ಭಕ್ತ ಶರಣರ ಪಾದಸೇವೆಯಲ್ಲಿಯೇ ಸರ್ವಸ್ವ ಕಂಡ ಮಹಾನುಭಾವರು. ಅಯ್ಯಾ ನಿಮ್ಮ ಶರಣರ ಚಮ್ಮಾವುಗೆಗೆ ಪೃಥ್ವಿ ಸಮಬಾರದು ಎಂದಿದ್ದಾರೆ. ಶರಣರು ತೊಡುವ ಚಪ್ಪಲಿಗಳೇ ಭೂಮಿಯ ತೂಕಕ್ಕಿಂತ ಹೆಚ್ಚಿನವು. ಇನ್ನು ಶರಣರ ಪಾದಗಳಿಗೆ ಸಮವಾದದ್ದು ಎಲ್ಲಿದೆ? ಶರಣರ ಪಾದಪರುಷದ ಮಹಿಮೆಯನ್ನು ಬಸವಣ್ಣನಂಥ ಅನುಭಾವಿ ಗಳು ಮಾತ್ರ ಮನಗಾಣಲು ಸಾಧ್ಯ.

೩. ಸ್ವಾವಲಂಬನೆ : ಪರಾವಲಂಬಿಯಾಗಿ ಬದುಕುವುದು ಮೊದಲು ಸಾವಿರಬಾರಿ ಸತ್ತಂತೆ. ಸ್ವಾವಲಂಬನೆ ಮನುಷ್ಯನ ಜೀವಂತಿಕೆಯ ಕುರುಹು.

*ಕಾಯದ ಕಳವಳಕ್ಕಂಜಿ ಕಾಯಯ್ಯಾ ಎನ್ನೆನು*
*ಜೀವನೋಪಾಯಕ್ಕೆ ಈಯಯ್ಯಾ ಎನ್ನೆನು*
*ಯದ್ ಭಾವಂತದ್ ಭವತಿ*
*ಉರಿಬರಲಿ, ಸಿರಿಬರಲಿ ಬೇಕು ಬೇಡೆನ್ನೆನಯ್ಯಾ*
*ಆನು ನಿಮ್ಮ ಹಾರೆನು, ಮಾನವರ ಬೇಡೆನು*
*ಆಣೆ ನಿಮ್ಮಾಣೆ ಕೂಡಲಸಂಗಮದೇವಾ*

ಮನುಷ್ಯರನ್ನು ಮಾತ್ರವಲ್ಲ ದೇವರಲ್ಲಿ ಬೇಡಲಾರೆ ಎಂಬುದು ಬಸವಣ್ಣನವರ ನಿಲುವು. ತೋಳ್ಬಲ ಮತ್ತು ಬುದ್ಧಿಬಲ ಹೊಂದಿ ದುಡಿಯುವ ವ್ಯಕ್ತಿಗೆ ಬೇಡುವ ಅನಿವಾರ್ಯತೆ ಎಂದಿಗೂ ಬರಲಾರದು.

೪. ಬಂಧುತ್ವ–ಸಹಬಾಳ್ವೆ : ಬಸವಣ್ಣನವರು ಮಹಾ ಸ್ನೇಹ ಜೀವಿ. ವಿಶ್ವ ಮನುಜರನ್ನು ಪ್ರೀತಿಸುವ ಹೃದಯ ಸಿರಿವಂತಿಕೆ ಅವರದು.

*ಹೊಯ್ದವರೆನ್ನ ಹೊರೆದವರೆಂಬೆನು*
*ಬೈದವರೆನ್ನ ಬಂಧುಗಳೆಂಬೆನು*
*ನಿಂದಿಸಿದವರೆನ್ನ ತಾಯಿ–ತಂದೆಗಳೆಂಬೆನು*
*ಅಳಿಗೊಂಡವರು ಆಳ್ದರೆಂಬೆ*
*ಹೊಗಳಿದವರೆನ್ನ ಹೊನ್ನಶೂಲದಲ್ಲಿಕ್ಕಿದವರು*
*ಕೂಡಲಸಂಗಮದೇವಾ*

ತನ್ನ ಪ್ರೀತಿಸಿದವರನ್ನು ಪ್ರೀತಿಸುವುದು ಮಾನವಧರ್ಮ; ತನ್ನ ಪ್ರೀತಿಸಿದವರನ್ನು ಪ್ರೀತಿಸುವುದು ಪರಧರ್ಮ; ತನ್ನ ಬೈದು ನಿಂದಿಸಿದವರನ್ನು ಪ್ರೀತಿಸುವುದು ಮನೋಧರ್ಮ. ಬಸವಣ್ಣನವರು ಸಾಧಿಸಿದ್ದು ಇಂಥ ಮನೋಧರ್ಮವನ್ನೆ. ಮಹಾತ್ಮರು ಬೈದವರನ್ನು, ನಿಂದಿಸಿದವರನ್ನು ಯಾವಾಗಲೂ ಪ್ರೀತಿಸುತ್ತಾರೆ. ಮನುಷ್ಯನ ತಪ್ಪುಗಳನ್ನು ತಿದ್ದಿ ನಿಜಮಾನವ ರನ್ನಾಗಿಸಲು ನಿಂದಕರು ಇರಬೇಕು.

*ತನುವಿನ ಕೋಪ ತನ್ನ ಹಿರಿತನದ ಕೇಡು*
*ಮನದ ಕೋಪ ತನ್ನ ಅರಿವಿನ ಕೇಡು*

ಇನ್ನೊಬ್ಬರ ಮೇಲೆ ದ್ವೇಷ ಸಾಧಿಸಿದರೆ ಆಗುವ ಹಾನಿ ತನಗೆ ಹೆಚ್ಚು. ದ್ವೇಷ ಸಾಧಿಸ ಹೊರಟ ವ್ಯಕ್ತಿ ಕ್ರೋಧಗೊಂಡು ಅರಿವಿನ ಪ್ರಜ್ಞೆ ಕಳೆದುಕೊಂಡು ಹುಚ್ಚ ನಾಗುತ್ತಾನೆ. ಹುಚ್ಚನಿಗೆ ಮಾನಸಿಕ–ದೈಹಿಕ ಸ್ವಸ್ಥತೆ, ಸುಖ, ಶಾಂತಿ, ಆರೋಗ್ಯ ಸಾಧ್ಯವಿಲ್ಲ. ಆದ್ದರಿಂದ ಬಸವಣ್ಣನವರು ಇವನಮ್ಮವ, ಇವನಮ್ಮವ, ಇವನಮ್ಮವ ಎಂದು ಇಡೀ

ಮನುಕುಲವನ್ನೇ ತಮ್ಮ ಕುಟುಂಬ ಎಂದು ತಿಳಿದಿದ್ದರು. ಅವರ ವಿಶ್ವ ಬಂಧುತ್ವ ಪ್ರೇಮ ಅನಾದೃಶವಾದದ್ದು ಕಾಗೆ-ಕೋಳಿಗಿಂತ ಕರಕಷ್ಟ ಬಂಧುತ್ವ ತತ್ತ್ವಗಳನ್ನು ಕಾಗೆ, ಕೋಳಿಗಳಂಥ ಸಾಮಾನ್ಯ ಪ್ರಾಣಿ-ಪಕ್ಷಿಗಳಿಂದ ಮನುಷ್ಯ ಕಲಿತುಕೊಳ್ಳಬೇಕೆಂದು ಬಸವಣ್ಣನವರು ಹೇಳಿದ್ದಾರೆ.

**೫. ಶುಚಿತ್ವ-ಶೀಲ:** ಮನೆಯೊಳಗೆ ರಜ ತುಂಬಿ, ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ ಬದುಕಿದರೆ ಮನುಷ್ಯನ ಬಾಳಿಗೆ ಅರ್ಥವಿಲ್ಲೆಂದಿದ್ದಾರೆ ಬಸವಣ್ಣನವರು. ಮಾತು ಮನ, ಭಾವ, ಕ್ರಿಯೆ ಇವುಗಳ ಶುದ್ಧತೆಯೇ ಶೀಲ ಪ್ರತಿಯೊಬ್ಬ ಮಾನವನಿಗೂ ಶೀಲದ ಅಗತ್ಯವಿದೆ.

*ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ*
*ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ,*
*ತನ್ನ ಬಣ್ಣಿಸಬೇಡ, ಇದಿರು ಹಳಿಯಲು ಬೇಡ,*
*ಇದೇ ಅಂತರಂಗ ಶುದ್ಧಿ; ಇದೇ ಬಹಿರಂಗ ಶುದ್ಧಿ*
*ಇದೇ ನಮ್ಮ ಕೂಡಲಸಂಗಮದೇವನೊಲಿಸುವ ಪರಿ.*

ಮನುಷ್ಯನ ಶುಚಿತ್ವಕ್ಕೆ ಈ ಸಪ್ತ ಆಚರಣೆಗಳೇ ಸಾಕು. ಅಂತರಂಗ ಶುದ್ಧಿ ಮತ್ತು ಬಹಿರಂಗ ಶುದ್ಧಿ ಎರಡು ಮುಖ್ಯ. ಮನಶುದ್ಧಗೊಳ್ಳದೆ ಶರೀರ ಶುದ್ಧಗೊಳ್ಳಲಾರದು. ಕ್ರಿಯೆ ಶುದ್ಧಗೊಳ್ಳದೆ ಆತ್ಮೋದ್ಧಾರ, ಸರ್ವಾಂಗ ಸಿದ್ಧಿ ಎಂದಿಗೂ ಸಾಧ್ಯವಿಲ್ಲ.

**೬. ದೇವರು-ಸ್ವರ್ಗ-ನರಕ :**

*ಕಲ್ಲು ದೇವರು ದೇವರಲ್ಲ ಮಣ್ಣು ದೇವರು ದೇವರಲ್ಲ*
*ಮರ ದೇವರು, ದೇವರಲ್ಲ, ಪಂಚಲೋಹದಲ್ಲಿ*
*ಮಾಡುವ ದೇವರು ದೇವರಲ್ಲ*
*ಸೇತುಬಂಧ ರಾಮೇಶ್ವರ ಗೋಕರ್ಣ ಕಾಶಿ*
*ಕೇದಾರ ಮೊದಲಾದ ಅಷ್ಟಾವಷ್ಟಿ*
*ಪುಣ್ಯ ತೀರ್ಥಂಗಳಲ್ಲಿಹ ದೇವರು ದೇವರಲ್ಲ*
*ತನ್ನ ತಾನರಿದು ತಾನಾರೆಂದು ತಿಳಿದಡೆ*
*ತಾನೇ ದೇವ ಅಪ್ರಮಾಣ ಕೂಡಲಸಂಗಮದೇವ.*

ಗುಡಿ, ಮಠ, ಮಸೀದಿಗಳಲ್ಲಿ ದೇವರು ಇಲ್ಲ, ಕಲ್ಲು ಕಟ್ಟಿಗೆ, ಮಣ್ಣು, ತಾಮ್ರ, ಕಂಚು, ಹಿತ್ತಾಳೆ, ಬೆಳ್ಳಿ, ಬಂಗಾರ, ಮೊದಲಾದವುಗಳಿಂದ ಮಾನವ ತಯಾರಿಸಿದ ಸಾವಿರಾರು ಜಡಮೂರ್ತಿಗಳು ದೇವರಲ್ಲ. ಕರಗುವ ಲೋಹ, ಬತ್ತುವ ಜಲ, ಒಣಗುವ ಮರ, ನಂದುವ ಬೆಂಕಿ, ಕಾಡಿಬೇಡಿ ಹಪಹಪಿಸಿ ತಿನ್ನುವ ಮಾರಿ, ಮಸಣಿ, ದುರ್ಗಿ, ದ್ಯಾಮಿ, ಜಕ್ಕಿಣಿ, ಎಲ್ಲವ್ವ, ಕಾಳ, ಧೂಳ, ಬೀರ ಇವರೆಲ್ಲ ದೇವರೇ? ಎಂದು ನೇರವಾಗಿ ಪ್ರಶ್ನಿಸುವ ಮೂಲಕ ಬಹು ದೇವತಾರಾಧನೆ ವ್ಯವಸ್ಥೆಯನ್ನು ಖಂಡಿಸಿದ್ದಾರೆ. ಅಂತೆಯೇ ಬಸವಣ್ಣನವರು ದೇವರಿಗಾಗಿ ಮಠ-ಮಸೀದಿಗಳನ್ನು ಕಟ್ಟುವ ಸಂಪ್ರದಾಯವನ್ನು ಬಲವಾಗಿ ನಿರಾಕರಿಸಿದ್ದಾರೆ.

*ಪಾಪ-ಪುಣ್ಯವೆಂಬುವ ತಮ್ಮಿಷ್ಟ ಕಂಡಿರೇ*
*ಅಯ್ಯಾ ಎಂದಡೆ ಸ್ವರ್ಗ, ಎಲವೋ ಎಂದರೆ ನರಕ*
*ದೇವಾ, ಭಕ್ತ, ಜೀಯಾ ಜೀಯ ಎಂಬ ನುಡಿಯೊಳಗೆ*
*ಕೈಲಾಸವಿದ್ದುದೇ ಕೂಡಲಸಂಗಮದೇವಾ*

*ದೇವಲೋಕ ಮರ್ತ್ಯಲೋಕ ಬೇರಿಲ್ಲ ಕಾಣಿಭೋ*
*ಸತ್ಯವ ನುಡಿವುದೇ ದೇವಲೋಕ*
*ಮಿಥ್ಯವ ನುಡಿವುದೇ ಮರ್ತ್ಯಲೋಕ*
*ಆಚಾರವೇ ಸ್ವರ್ಗ, ಅನಾಚಾರವೇ ನರಕ*
*ಕೂಡಲಸಂಗಮದೇವಾ ನೀವೇ ಪ್ರಮಾಣು*

ಪಾಪ-ಪುಣ್ಯ ಸ್ವರ್ಗ-ನರಕಗಳೆಂಬುವು ಭೌತಿಕ ಸಿದ್ಧ ವಸ್ತುಗಳಲ್ಲ. ಆದ್ದರಿಂದ ಇವುಗಳನ್ನು ಅಲ್ಲಿ-ಇಲ್ಲಿ ಎಲ್ಲೆಲ್ಲಿಯೋ ಹುಡುಕಾಡಿದರೆ ಲಭಿಸತಕ್ಕವಲ್ಲ. ಇವು ಪೂರ್ವಜನ್ಮಗಳ ಫಲವೂ ಅಲ್ಲ. ಮನುಷ್ಯನ ಕರ್ತೃತ್ವ ಶಕ್ತಿಯೇ ಪಾಪ ಪುಣ್ಯ. ಸ್ವರ್ಗ-ನರಕಗಳ ಬ್ರಹ್ಮ. ಮನುಷ್ಯನ ನಡೆ-ನುಡಿಗಳಿಂದಲೇ ಅವು ಪ್ರಾಪ್ತವಾಗುತ್ತವೆ. ಆಚಾರವುಳ್ಳ ವ್ಯಕ್ತಿಯ ಮನ, ಮನೆ ಸ್ವರ್ಗ, ಆಚಾರವಿಲ್ಲದ ವ್ಯಕ್ತಿಯ ಮನೆ ನರಕ. ಮರ್ತ್ಯಲೋಕವೇ ಕರ್ತಾರನ ಕಮ್ಮಟ ಎಂದಿದ್ದಾರೆ ಬಸವಣ್ಣನವರು.

**೭. ಕಾಯಕ-ದಾಸೋಹ:** ಮನುಷ್ಯನ ಎಲ್ಲ ಚಟುವಟಿಕೆಗಳ ಕೇಂದ್ರ ಆರ್ಥಿಕ ವ್ಯವಸ್ಥೆ. ಸಮಾಜದಲ್ಲಿ ಆರ್ಥಿಕ ವ್ಯವಸ್ಥೆ ಕುಸಿದಾಗ ಕೊಲೆ, ಮೋಸ, ಭ್ರಷ್ಟಾಚಾರಗಳು ನಡೆಯುತ್ತವೆ. ಆದ್ದರಿಂದ ಬಸವಣ್ಣನವರು ಉಣ್ಣುವವರೆಲ್ಲ ಕಾಯಕ ಮಾಡಲೇಬೇಕೆಂದು ಕಡ್ಡಾಯಗೊಳಿಸಿದರು. ದುಡಿಮೆ ಶಬ್ದವನ್ನು ಕಾಯಕ ಎಂದು ಪರಿಷ್ಕರಿಸಿ ಉದಾತ್ತೀಕರಿಸಿದರು.

ದುಡಿಮೆ ಎಂಬಲ್ಲಿ ಸ್ವಾರ್ಥ ಇರುತ್ತದೆ. ಅದೊಂದು ಯಾಂತ್ರಿಕ ಕ್ರಿಯೆ. ಇಲ್ಲಿ ಹಣಗಳಿಕೆಯೇ ಮುಖ್ಯ.





*ಕೃಷಿ ಕೃತ್ಯ ಕಾಯಕದಿಂದಾಡೇನು ?*
*ತನುಮನ ಬಳಲಿಸಿ ತಂದು ದಾಸೋಹ ಮಾಡುವ*
*ಪರಮ ಸದ್‌ಭಕ್ತನ ಪಾದವ ತೋರಯ್ಯಾ ಎನಗೆ*
*ಅದೆಂತೆನೆ ಆತನ ತನುಶುದ್ಧ, ಆತನ ಮನಶುದ್ಧ*
*ಆತನ ನಡೆಶುದ್ಧ, ಆತನ ನುಡಿಯೆಲ್ಲ ಪಾವನವು*

ಕಾಯಕ ಎಷ್ಟೊಂದು ಪವಿತ್ರವಾದದ್ದು ಎಂಬುದನ್ನು ಬಸವಣ್ಣನವರು ಮನಗಂಡಿದ್ದರು. ಕಾಯಕಷ್ಟದಿಂದ ಮಾಡುವುದೇ ಕಾಯಕ. ಕಾಯಕದಲ್ಲಿ ಶ್ರೇಷ್ಠ-ಕನಿಷ್ಠ ಭೇದ ಭಾವಗಳಿಲ್ಲ. ಎಲ್ಲ ಕಾಯಕಕ್ಕೂ ಸಮಾನ ಗೌರವ. ತನು, ಮನ, ಶುದ್ಧಗೊಂಡು ಶ್ರದ್ಧೆಯಿಂದ ಕಾಯಕ ಮಾಡಿ ತಕ್ಕ ಪ್ರತಿಫಲ ಪಡೆದು, ಸಮಾಜದ ಸತ್ಕಾರ್ಯಗಳಿಗೆ ದಾಸೋಹ ಮಾಡುವುದು ಕಾಯಕ ತತ್ತ್ವದ ಬೀಜ. ಇಂಥ ಕರ್ಮಯೋಗಿ ಆಗಿದ್ದರು ಶರಣಶ್ರೇಷ್ಠ ಬಸವಣ್ಣನವರು.

೮. ಜನಸೇವೆ : ಪರೋಪಕಾರಾರ್ಥಮಿದಂ ಶರೀರಂ ಪರರಿಗೆ ಉಪಕಾರ ಮಾಡುವುದಕ್ಕಾಗಿಯೇ ಶರೀರವಿದೆ ಎಂದು ಮಹಾತ್ಮರು ಭಾವಿಸುತ್ತಾರೆ.

*ಹೊತ್ತು ಹೋಗದ ಮುನ್ನ*
*ಮೃತ್ಯು ಮುಟ್ಟದ ಮುನ್ನ*
*ತೊತ್ತು ಕೆಲಸವ ಮಾಡು*
*ಕೂಡಲಸಂಗಮದೇವನ*

ಎಂದಿದ್ದಾರೆ ಬಸವಣ್ಣನವರು ರಕ್ತ, ಮಾಂಸ, ಕೀವುಗಳ ಹೊಂಡವಾದ, ಎಲುಬಿನ ಹದರವಾದ ತೊಗಲಿನ ಚೀಲವಾದ ಈ ಮನುಷ್ಯನ ಶರೀರಕ್ಕೆ ಉಸಿರು ಇರುವವರೆಗೆ ಮಾತ್ರ ಬೆಲೆ. ಆದ್ದರಿಂದ ಪ್ರತಿಯೊಬ್ಬನು ತನ್ನ ಶಕ್ತಿ, ವಯಸ್ಸು ಕಳೆದು ನಾವು ಶರೀರ ಸಮರ್ಪಿಸುವ ಮೊದಲು ಜನಸೇವೆ ಮಾಡಿ ಬದುಕನ್ನು ಸಾರ್ಥಕಗೊಳಿಸಿಕೊಳ್ಳಲು ಬಸವಣ್ಣನವರು ತಿಳಿಸಿದ್ದಾರೆ.

**೯. ಸಮಾನತೆ :** ಸಮಾನತೆ ಸಾಧಿಸುವುದೇ ಬಸವಣ್ಣನವರ ಜೀವನದ ಮುಖ್ಯ ಧ್ಯೇಯವಾಗಿತ್ತು. ಎಲ್ಲರ ಬದುಕು ಹಸನಾಗಬೇಕು. ಎಲ್ಲರೂ ಸರ್ವಸುಖಿಗಳಾಗಿ ಬದುಕಬೇಕೆಂದು ಅವರ ಪರಮಿಚ್ಛೆ, ಅಂತೆಯೇ ಬಸವಣ್ಣನವರು ವರ್ಗ, ವರ್ಣ, ಪ್ರಧಾನ ಶ್ರೇಣೀಕೃತ ಸಮಾಜವನ್ನು ಕೆಡವಿ ಜನಪರ ಪ್ರಧಾನ ಸಮಾಜವನ್ನು ಕಟ್ಟ ಬಯಸಿದ್ದರು. ಹಾಗೆಯೇ ಕಟ್ಟಿ ತೋರಿಸಿದರು.

ಸಾಮಾಜಿಕ ಸಮಾನತೆ, ಧಾರ್ಮಿಕ ಸಮಾನತೆ, ಆರ್ಥಿಕ ಸಮಾನತೆ. ಇವು ಜನಪರ ಪ್ರಧಾನ ಸಮಾಜದ ಮುಖ್ಯ ಮೂರು ಸೂತ್ರಗಳು. ಜನಪರ ಸಮಾಜದಲ್ಲಿ ಯಾವುದೇ ಕುಲ, ವರ್ಗ, ವರ್ಣ, ಲಿಂಗ, ಪಂಥ, ಕಸುಬು, ವಯಸ್ಸು, ಅಂತಸ್ತುಗಳ ಅಂತರವಿಲ್ಲ.

ಕೊಲ್ಲುವವನೇ ಮಾದಿಗ; ಹೊಲಸು ತಿಂಬುವವನೇ ಹೊಲೆಯ ಎಂದು ಬಸವಣ್ಣನವರು ಜಾತಿಯ ಕುರಿತು ಹೊಸ ವ್ಯಾಖ್ಯಾನ ಬರೆದಿದ್ದಾರೆ. ಅಸ್ಪೃಶ್ಯತಾ ನಿವಾರಣೆ, ಸ್ತ್ರೀ ಸಮಾನತೆಗೆ ವ್ಯವಸ್ಥಿತವಾಗಿ ಹೋರಾಟ ಮಾಡಿದ ಶ್ರೇಯಸ್ಸು ಬಸವಣ್ಣನವರಿಗೆ ಸಲ್ಲುತ್ತದೆ.

ಹೀಗೆ ಬಸವಣ್ಣನವರು ಮನುಕುಲಕ್ಕೆ ಹತ್ತು-ಹಲವು ಬಗೆಯಾದ ಕೊಡುಗೆ ನೀಡಿದ್ದಾರೆ. ಅವರು ನಡೆದು ತೋರಿದ ಮಾರ್ಗದಲ್ಲಿ ನಾವೆಲ್ಲ ನಡೆದಿದ್ದಾದರೆ ವಿಶ್ವವನ್ನೇ ಗೆಲ್ಲುವಲ್ಲಿ ಸಂದೇಹವಿಲ್ಲ. ಬಸವಜಯಂತಿಯು ಕೇವಲ ಆಡಂಬರದ, ಪ್ರತಿಷ್ಠೆಯ ಭಾಷಣವಾಗದೆ ಸತ್ಕಾರ್ಯಗಳ ಅನುಷ್ಠಾನವಾಗಬೇಕು. ಬಸವತತ್ತ್ವಗಳ ಬಗ್ಗೆ ಮಾತು ಸಾಕು; ಆಚರಣೆಗೆ ಮುಖ್ಯ ಆದ್ಯತೆ ನೀಡಬೇಕಾದ ಅಗತ್ಯವಿದೆ.

❖

### ಶ್ರೀವಾಣಿ

*ವ್ಯಕ್ತಿ ಮನಸ್ಸನ್ನು ಸಂಯಮಗೊಳಿಸಿದಂತೆ, ಅದು ಮನುಷ್ಯನ ಜೀವನದಲ್ಲಿ ತನ್ನ ಕರ್ತವ್ಯವನ್ನು ತಾನೇ ತಾನಾಗಿ ನಿರ್ದೇಶನ ಮಾಡುತ್ತದೆ. ಆ ನಿರ್ದೇಶನ ಎಂದೂ ವ್ಯಕ್ತಿಯನ್ನ ಮೋಸಗೊಳಿಸಲಾರದು. ಅವನಿಗರಿಯದಂತೆ ಅವನನ್ನು ಸನ್ಮಾರ್ಗದಲ್ಲಿ ತೊಡಗಿಸುತ್ತದೆ. ಸರಿಯಾದ ನಿರ್ಣಯವನ್ನು ಕೊಡುತ್ತದೆ. ಅದನ್ನೇ ದೊಡ್ಡವರು ಅಂತನಿರ್ದೇಶನ, ಅಂತರ್ವಾಣಿ ಎನ್ನುವುದು. ಅಲ್ಲಿ ಬುದ್ಧಿಗಿಂತ ಹೃದಯಕ್ಕೆ ಪ್ರಧಾನ ಸ್ಥಾನವುಂಟು. ಅದೇ ಹೆಚ್ಚು ಕೆಲಸ ಮಾಡುತ್ತದೆ, ಅಂತರ್ವಾಣಿ ಸತ್ಯದ ಜಲದ ಕಣ್ಣಿದ್ದಂತೆ, ಸದಾ ಅದರಿಂದ ದಿವ್ಯ ಪ್ರತಿಭೆ ಹರಿಯುತ್ತಿರುತ್ತದೆ.*







# ಬೇಡದೇ ಬಂದದ್ದು ಲಿಂಗಭೋಗ
# ಬೇಡಿ ಬಂದದ್ದು ಅಂಗಭೋಗ

-ಬಸವರಾಜ ಪುರಾಣಿಕ *

'ಶರಣಚರಿತಾಮೃತ'ವೆಂಬ ಮೇರುಕೃತಿಯನ್ನು ರಚಿಸಿ ಚಿರಸ್ಮರಣೀಯರಾದ ಹಾಗೂ 'ಏನಾದರೂ ಆಗು, ಮೊದಲು ಮಾನವನಾಗು' ಎಂದು ಮಾನವ ಪಾರಮ್ಯದ ಸಂದೇಶವನ್ನು ಸಾರಿದ ಶ್ರೇಷ್ಠ ಕವಿ, ವಚನಕಾರ, ವಾಗ್ಮಿ ಹಾಗೂ ದಕ್ಷ ಐ.ಎ.ಎಸ್. ಅಧಿಕಾರಿ ಎಂದು ಖ್ಯಾತರಾದ ಸಿದ್ಧಯ್ಯ ಪುರಾಣಿಕರು ನನ್ನ ದೊಡ್ಡ ಅಣ್ಣ. ಅವರ ಕೊನೆಯ ದಿನಗಳಲ್ಲಿ ನಾನು ಅವಕಾಶ ದೊರೆತಾಗಲೆಲ್ಲ ಅವರೊಂದಿಗೆ 'ಅದು-ಇದು' ಎಂದು ಕವಿತೆ, ಕಾವ್ಯ, ಅನುಭಾವ ಇತ್ಯಾದಿ ಕುರಿತು ಚರ್ಚೆ ಮಾಡುತ್ತಿದ್ದೆ. ಚರ್ಚೆ ಅನ್ನುವುದಕ್ಕಿಂತ ನಾನು ಪ್ರಶ್ನೆ ಕೇಳುತ್ತಿದ್ದೆ. ನನ್ನ ಕುತೂಹಲ ಭರಿತ ಹಾಗೂ ತೀಕ್ಷ್ಣ ದೃಷ್ಟಿಯ ಪ್ರಶ್ನೆಗಳಿಗೆ ಅವರು ನಗುನಗುತ್ತ ಉತ್ತರಿಸಿ ಆಗಾಗ ನನ್ನ ಪ್ರಶ್ನೆಯ ವೈಶಿಷ್ಟ್ಯಕ್ಕೆ ಬೆರಗು ವ್ಯಕ್ತ ಮಾಡುತ್ತಿದ್ದರು.

ಒಂದು ಸಲ ಮಾತು ಮಾತಿನಲ್ಲಿ ಒಂದು ಪ್ರಶ್ನೆ ಕೇಳಿದೆ. 'ಈಚೆನ ಕಾಲಮಾನದಲ್ಲಿ ಭಾರತವು ಕಂಡ ವಿಶ್ವಮನ್ನಣೆಯ ಮಹಾನುಭಾವಿಗಳು ಯಾರು?' ಅವರು ನಗುನಗುತ್ತ ಉತ್ತರಿಸಿದರು. 'ರಾಮಕೃಷ್ಣಪರಮಹಂಸ ಹಾಗೂ ರಮಣ ಮಹರ್ಷಿಗಳು. ಇಬ್ಬರೂ ಮಹಾನುಭಾವಿಗಳು. 'ಶ್ರೀ ಅರವಿಂದರನ್ನು ಸೇರಿಸಬಹುದಲ್ಲ?' ಎಂದು ನಾನು ಪ್ರಶ್ನಿಸಿದೆ. ಶ್ರೀ ಅರವಿಂದರೂ ದಿವ್ಯಚೇತನರು. ಅವರು ಸಹ ಅನುಭಾವಿಗಳು. ಆದರೆ ಈ ಇಬ್ಬರ ಜೊತೆಯಲ್ಲಿ ಅವರನ್ನು ಸೇರಿಸಲಾಗದೆಂದು ನನ್ನ ಭಾವನೆ. 'ಅವರ ಮಾರ್ಗವು, ಸಿದ್ಧಿಯೂ ಶ್ಲಾಘನೀಯ. 'ಸರಿ ಮೂರನೆಯ 'ರನ್ನಾಗಿ ನೀವು ಯಾರನ್ನು ಸೂಚಿಸಲು ಸಾಧ್ಯ ಯಾಕೆಂದರೆ ಶರಣಚರಿತಾಮೃತ ಬರೆಯುವ ಅವಧಿಯಲ್ಲಿ ನೀವು ಇಡಿ ಭಾರತದ ಅನುಭಾವಿಗಳ ಕೂಲಂಕಷ ಅಧ್ಯಯನ ಮಾಡಿರುವಿರಿ'

'ಮೂರನೆಯವರನ್ನು ಸೇರಿಸುವುದಾದರೆ ನಾನು ಅಥಣಿಯ ಶಿವಯೋಗಿಗಳನ್ನು ಸೂಚಿಸುತ್ತೇನೆ'. ನನಗೆ ಒಂದು ಕ್ಷಣ ಆಶ್ಚರ್ಯವಾಯಿತು. ಆದರೂ ತಡೆತಡೆದು ನುಡಿದೆ. ಅಥಣಿ ಶಿವಯೋಗಿಗಳ ಹೆಸರು ಕರ್ನಾಟಕದಲ್ಲಿಯೆ ಪೂರ್ತಿಯಾಗಿ ತಿಳಿದಿಲ್ಲ. ಉತ್ತರ ಕರ್ನಾಟಕದ, ಒಂದಿಷ್ಟು ಮಹಾರಾಷ್ಟ್ರದ ಪ್ರದೇಶ ಬಿಟ್ಟರೆ ಇರುವ ಪುರಾಣ ಹಾಗೂ ಚರಿತ್ರೆಗಳಲ್ಲಿ ಪವಾಡಗಳನ್ನು ಬಿಟ್ಟರೆ ಹೆಚ್ಚಿಗೆ ತಿಳಿಯದು, ಅದೇಕೆ?' ಅವರು ಸ್ಪಷ್ಟಪಡಿಸಿದರು. 'ಬಸವರಾಜ, ರಾಮಕೃಷ್ಣಪರಮಹಂಸರಿಗೆ ಸ್ವಾಮಿವಿವೇಕಾನಂದರು ಸಿಕ್ಕಿದ. ರಮಣ ಮಹರ್ಷಿಗಳಿಗೆ ಪಾಲ್ ಬ್ರುಂಟನ್ ಲಭಿಸಿದ. ಅದಕ್ಕಾಗಿ ಅವರಿಬ್ಬರೂ ವಿಶ್ವವಿಖ್ಯಾತರಾದರು. ನಮ್ಮ ಅಥಣಿ ಶಿವಯೋಗಿಗಳಿಗೆ ಅಂತಹ ಸತ್ವಶಾಲಿ ದೊಡ್ಡ ವ್ಯಕ್ತಿ ದೊರೆಯಲಿಲ್ಲ. ಅದಕ್ಕಾಗಿ ಈ ಅವಜ್ಞೆ.

'ನೀವೇ ಅವರನ್ನು ಕುರಿತು ಒಂದು ಉತ್ಕೃಷ್ಟ ಗ್ರಂಥ ಬರೆಯಬಹುದಲ್ಲ?' ಎಂದು ನಾನು ಪ್ರಶ್ನಿಸಿದೆ.

'ನಾನು ಮಾಡುವಷ್ಟು ಕೆಲಸವನ್ನು ದೇವರು ನಡೆಸಿಕೊಟ್ಟನು ಅಂದಹಾಗೆ ಅವರ ಬಗ್ಗೆ ನೀನೇ ಏಕೆ ಬರೆಯಬಾರದು?' ಎಂದು ಹೇಳಿ ನನ್ನ ಬಾಯಿ ಕಟ್ಟಿಸಿದರು. ಅವರ ಮಾತಿನಲ್ಲಿ ಅವರು ನನ್ನಲ್ಲಿಟ್ಟ ನಂಬಿಗೆ ಬಿಂಬಿಸಿತು. ಮುಂದೆ ಈ ವಿಷಯ ಕುರಿತು ಮಾತು ಮುಂದುವರಿಯಲಿಲ್ಲ. ಮತ್ತೆ ಇನ್ನಾವುದೋ ವಿಷಯವನ್ನು ಕುರಿತು ಚರ್ಚಿಸಿದೆವು.

ಆ ದಿನದಿಂದ ನಾನು ಮತ್ತೊಮ್ಮೆ ರಾಮಕೃಷ್ಣ ಪರಮಹಂಸರು ಹಾಗೂ ರಮಣ ಮಹರ್ಷಿಗಳ ಬಗ್ಗೆ ಗಹನ ಅಧ್ಯಯನ ಆರಂಭಿಸಿದೆ. ಜೊತೆ ಜೊತೆಗೆ ಅಥಣಿ ಶ್ರೀಗಳನ್ನು ಕುರಿತು ಲಭ್ಯವಿರುವ ಸಾಹಿತ್ಯವನ್ನು ತಡಕಾಡತೊಡಗಿದೆ.

ಮುಂದೆ ನಮ್ಮ ಅಣ್ಣ ವಿಧಿವಶರಾದರು. ಇಂತಹ ಅಮೂಲ್ಯ ಚರ್ಚೆ ನಡೆಸುವ ಅವಕಾಶ ನಿಂತಿತು. ಆದರೆ ಅಥಣಿ ಶ್ರೀಗಳ ಬಗ್ಗೆ ಹೊಂದಿದ್ದ ಭಾವನೆಯನ್ನು ನೆನಪಿಸಿ

* 1337, 3ನೇ ಕ್ರಾಸ್, ಮಾಗಡಿ ರೋಡ್, ಕೆಎಚ್‌ಬಿ ಕಾಲೋನಿ, ಬೆಂಗಳೂರು-560 070.







ಕೊಳ್ಳುತ್ತಿದ್ದಂತೆ ಅವರೇ ಒಂದು ಪುಸ್ತಕ ಬರೆದಿದ್ದರೆ ಎಷ್ಟು ಬೆಲೆ ಬರುತ್ತಿತ್ತು ಎಂಬ ಕೊರಗು ಮಾತ್ರ ಇಂದಿಗೂ ಉಳಿದಿದೆ.

ಈಗ ನಾನು ಅಥಣಿ ಶಿವಯೋಗಿಗಳ ಬಗ್ಗೆ ಬರೆಯುವ ಟಿಪ್ಪಣಿ ನಮ್ಮ ಅಣ್ಣನವರ ಅಂತರಂಗದಲ್ಲಿದ್ದ 'ರಾಮಕೃಷ್ಣ ಪರಮಹಂಸ-ರಮಣ ಮಹರ್ಷಿ-ಅಥಣಿ ಶಿವಯೋಗಿ- ಈ ಮಹಾನುಭಾವರ ತ್ರಿದಳದ ಕಲ್ಪನೆಗೆ ಒಂದಿನಿತು ಸುಳುಹು ಕೊಡಬಲ್ಲುದಾದರೆ ನನಗೆ ಸಂತೋಷ.

ಅಥಣಿಯ ಜಂಗಮಜ್ಯೋತಿ ಮುರುಘೇಂದ್ರ ಶಿವಯೋಗಿಗಳು ಶರಣರಂತೆ ಬಾಳಿದವರು. ನುಡಿಯಂತೆ, ಅದೇಕೆ ನುಡಿಯನ್ನೇ ನಡೆದವರು. ಅಂತೆಯೇ ಈ ಸೌಮ್ಯ ಸ್ವಭಾವದ, ಸಂಕೋಚ ಮನೋಭಾವದ ಶಿವಯೋಗಿಗಳು ತಮ್ಮ ಬಳಿ ಬಂದವರ ಮನ ಬೆಳಗಿದರು, ಭಾವ ಬಲಿಸಿದರು. ಶಿವಯೋಗಿಗಳ ಬಗ್ಗೆ ಕೇಳಿ ತಿಳಿದುಕೊಂಡವರು ಶಿವಯೋಗಿಯ ದರುಶನ ಎಂದು ಎಂಬ ಹಂಬಲದಿಂದ, ಚುಂಬಕದ ಶಕ್ತಿಯತ್ತ ಸೆಳೆಯಲ್ಪಡುವ ಕಬ್ಬಿಣದ ಚೂರುಗಳಂತೆ, ಅಥಣಿಯತ್ತ ಧಾವಿಸುತ್ತಿದ್ದರು. ಶಿವಯೋಗಿಯ ದರುಶನವು ಆಗುತ್ತಿದ್ದಂತೆ ಅವರ ಆವೇಶದ ಆವೇಗ ಶಾಂತವಾಗುತ್ತ ಅವರ ದಣಿದ ದೇಹಕ್ಕೆ ಕಾತರದ ಮನಕ್ಕೆ ಹಿತಸ್ಪರ್ಶವಾಗುತ್ತಿತ್ತು. ದಿವ್ಯದರ್ಶನ ಪಡೆದ ಕಣ್ಣುಗಳಲ್ಲಿ ಅರಿವಿಲ್ಲದೆ ಆನಂದಾಶ್ರು ಸುರಿಯುತ್ತಿತ್ತು. ತಿಳಿಯದಂತೆ ಕೈಗಳೆರಡು ಮೇಲೆದ್ದು ಕೈಮುಗಿಯುತ್ತಿದ್ದವು, ಶ್ರೀಪಾದಕ್ಕೆ ಉರುಳಿ ನೆಮ್ಮದಿ ಪಡೆಯುತ್ತಿದ್ದವು. ಪಾವನ ತೀರ್ಥದಲ್ಲಿ ಮಿಂದು ಮಡಿಯಾದಂತೆ ಅವರ ತನು-ಮನಗಳು ಚೇತರಿಸಿಕೊಳ್ಳುತ್ತಿದ್ದವು.

ಶಿವಯೋಗಿಗಳು ಪ್ರತಿನಿತ್ಯ ಪ್ರಾತಃಕಾಲ 8 ಗಂಟೆಗೆ ಶಿವನಾಮಸ್ಮರಣೆ ಮಾಡುತ್ತ ಉಪ್ಪಡಿಸುವುದು, ಆ ಮೇಲೆ ಪ್ರಾತಃರ್ವಿಧಿಗಳನ್ನು ಮುಗಿಸಿ ಯೋಗಮಂಟಪವನ್ನೂ, ಅದರ ಸುತ್ತಲಿನ ಸ್ಥಳವನ್ನೂ ತಾವೇ ಬಹು ಶುಚಿಯಾಗಿ ಉಡುಗುವುದು, ಆನಂತರ ಊರ ಹೊರಗೆ ಸಂಚರಿಸುವುದು, ಬಾವಿಯಿಂದ ನೀರನ್ನು ತಾವೇ ಸೇದಿಕೊಂಡು ಸ್ನಾನ ಮಾಡಿ ತಮ್ಮ ಬಟ್ಟೆಗಳನ್ನು ತಾವೇ ತೊಳೆದುಕೊಂಡು ಹೂದೋಟದಲ್ಲಿ ಪತ್ರ ಪುಷ್ಪಗಳನ್ನು ತರುಲತೆಗಳಿಗೆ ನೋವಾಗದಂತೆ ಹಿತಮಿತವಾಗಿ ಎತ್ತಿ ತಂದು ಪ್ರಾತಃಕಾಲದ ಪೂಜೆಯನ್ನು ಪೂರೈಸುವುದು. ಆ ಮೇಲೆ ಮಧ್ಯಾಹ್ನದ ಪೂಜೆಯನ್ನು ಪೂರೈಸುವುದು, ನಂತರ ಅಪ್ಪನವರ ವಚನಾನುಭವ (ಶಿವಯೋಗಿಗಳಿಗೆ ಬಸವಣ್ಣನವರ ವಚನಗಳಲ್ಲಿ ಅಸೀಮ ಭಕ್ತಿ. ಎಂತಲೇ ಅವುಗಳನ್ನು ಅಪ್ಪನವರ ವಚನಗಳೆಂದು ಕರೆಯುತ್ತಿದ್ದರು. ಬಸವಣ್ಣನವರ ವಚನಗಳೆಂದು ಎಂದೂ ಕರೆಯುತ್ತಿರಲಿಲ್ಲ) ಆ ಬಳಿಕ ಸಾಯಂಕಾಲದ ಪೂಜೆ. ಇದು ಅವರ ನಿತ್ಯದ ದಿನಚರಿ. ಅದನ್ನೆಂದೂ ಚಾಚೂ ತಪ್ಪದೇ ಆಚರಿಸುತ್ತಿದ್ದರು. ಶಿವಯೋಗಿಗಳ ಶಕ್ತಿಗಳೆಲ್ಲ ವೃತ್ತಿಗಳೆಲ್ಲ ಭಾವನಗಳೆಲ್ಲ ಶಿವಮಯವಾಗತೊಡಗಿ ಲಿಂಗಪೂಜೆಯಲ್ಲಿ ಲಯವಾಗತೊಡಗಿದವು.

ಶಿವಯೋಗಿಗಳ ಲಿಂಗಪೂಜೆಯ ಕೋಣೆಯು ಸುಮಾರು ೨೫ ವರ್ಷಗಳ ಹಿಂದಿನವರೆಗೂ ಜೋಪಾನವಾಗಿತ್ತು. ಈಗ ಅದು ಆಧುನಿಕಗೊಂಡಿದೆ. ಮೂಲಕೋಣೆಯನ್ನೇ ಜತನವಾಗಿ ಕಾಪಾಡಿಕೊಂಡ ಅವರ ಪಾವಿತ್ರ್ಯವನ್ನು ಪಾವನತೆ ಯನ್ನು ಉಳಿಸಿಕೊಂಡು ರಕ್ಷಿಸಿಕೊಳ್ಳುವ ಸಾಧ್ಯತೆ ಇತ್ತು. ಆದರೆ ಅದರತ್ತ, ಈಚೆನ ಗಮನ ಹರಿಯದ್ದು ದುರಂತ ಇರಲಿ. ಆ ಕೋಣೆಗೆ ಹಳ್ಳಿಯ ಹಳೆಯ ಕಾಲದ ಗರಡಿ ಮನೆಯ ಬಾಗಿಲಿನಂತಹ ಬಾಗಿಲಿತ್ತು ಒಳಗೆ ಪ್ರವೇಶಿಸಬೇಕಾದರೆ ತಲೆ ಬಗ್ಗಿಸಿ ತನು ಮಣಿಸಿ ಎಚ್ಚರದಿಂದ ಪ್ರವೇಶಿಸಬೇಕಿತ್ತು. ಅಂಥ ಕೋಣೆಯಲ್ಲಿ ಶಿವಯೋಗಿಗಳ ಲಿಂಗಪೂಜೆ ಲಿಂಗಾರ್ಪಣೆ, ಸದಾ ಜರುಗುತ್ತಿದ್ದವು. ಶಿವಯೋಗಿಗಳ ಲಿಂಗಪೂಜೆಗೆ ಅರ್ಪಣೆಗೆಂದು ಭಕ್ತಿಭಾವದಿಂದ ಎಡೆಯನ್ನು ಆ ಸಣ್ಣ ಬಾಗಿಲಿನಿಂದ ಒಳಗೆ ಶಿವಪೂಜಾಮರಿ ಇರಿಸುತ್ತಿದ್ದ. ಇದು ವಾಡಿಕೆಯಾಗಿತ್ತು.

ಶಿವಯೋಗಿಗಳು ಲಿಂಗಾರ್ಪಿತಕಾಲಕ್ಕೆ ತಾನಾಗಿ ಏನೇ ಬಂದರೂ ಅದನ್ನೇ ಶಿವಪ್ರಸಾದವೆಂದು ಸ್ವೀಕರಿಸುತ್ತಿದ್ದರು. ಎಡೆಯುಬರಲೆಂದು ಕಾದು ಕುಳಿತುಕೊಳ್ಳುತ್ತಿರಲಿಲ್ಲ. ಸಕಾಲಕ್ಕೆ ಬರದಿದ್ದರೆ ಶಿವನ ಇಚ್ಛೆ ಇಲ್ಲವೆಂದು ಭಾವಿಸಿ ತಮ್ಮ ಮುಂದಿನ ಕ್ರಿಯೆಗಳನ್ನು ಮುಗಿಸುತ್ತಿದ್ದರು. ಎಡೆ ಬರಲಿಲ್ಲವೆಂದು ಯಾರ ಮೇಲೂ ಹರಿಹಾಯುತ್ತಿರಲಿಲ್ಲ. ಎಡೆ ಸಕಾಲಕ್ಕೆ ಬಂದರೂ ಅದು ದೂರದಲ್ಲಿದ್ದರೆ ಬಾಗಿ ಕೈಚಾಚಿ ಅದನ್ನು ತೆಗೆದುಕೊಳ್ಳುತ್ತಿರಲಿಲ್ಲ.

ಎಡೆಯು ತಾವಿದ್ದೆಡೆಯಲ್ಲಿಯೆ ಇರಬೇಕು. ಬಾಗಿ, ಕೈ

ನೀಡಿ ಅದನ್ನು ತೆಗೆದುಕೊಂಡದ್ದಾದರೆ ಅದು ಅಂಗದಾಸೆ. ಅದು ಅಂಗಭೋಗ, ಲಿಂಗಭೋಗವಲ್ಲ. ಆದುದರಿಂದ ಶಿವಯೋಗಿಗಳು 'ಬಂದುದ ಕೈಕೊಳ್ಳಬಲ್ಲಡೆ ನೇಮ' ಎಂಬ ಅಪ್ಪನವರ ವಚನದಂತೆ ಕೈಗೆ ನಿಲುಕುವಷ್ಟರಲ್ಲಿಯೇ ಎಡೆ ಯಿದ್ದರೆ ಮಾತ್ರ ತೆಗೆದುಕೊಳ್ಳುತ್ತಿದ್ದರು. ಅಡುಗೆಯವರ ಅಜಾಗರೂಕತೆಯಿಂದ ಅನೇಕ ಸಲ ಎಡೆ ತಪ್ಪಿದ್ದುಂಟು. ಆಗಲೂ ಅವರು ಸುಪ್ರಸನ್ನರಾಗಿಯೇ ತಮ್ಮ ನಿತ್ಯಕರ್ಮ ಗಳನ್ನು ನೆರವೇರಿಸುತ್ತಿದ್ದರು. ಎಡೆ ತಪ್ಪಿತೆಂದು ಯಾರಾದರೂ ಕಳವಳಿಸಿದರೆ, 'ನೀವೇಕೆ ಚಿಂತಿಸುವಿರಿ? ನಿಮ್ಮಿಚ್ಛೆಯೆ? ಶಿವನಿಚ್ಛೆ ಇರಲಿಲ್ಲ' ಎಂದು ಹೇಳಿ ಸಮಾಧಾನ ಪಡಿಸುತ್ತಿದ್ದರು.

ಬೇಕೆನ್ನುವುದು ಭೋಗವಾದರೆ ಬೇಡವೆನ್ನುವುದು ವೈರಾಗ್ಯ. ಎರಡೂ ಶರಣರ ನಡೆಗೆ ಸಲ್ಲವು. ಆದ್ದರಿಂದ ಶಿವಯೋಗಿಗಳು ಬಂದುದ ಕೈಗೊಳ್ಳುವ ನೇಮವಿಡಿದರು. 'ಬಯಸಿ ಬಂದದ್ದು ಅಂಗಭೋಗ, ಬಯಸದೇ ಬಂದದ್ದು ಲಿಂಗಭೋಗ' ಎಂಬ ಅಪ್ಪನವರ ವಚನ ಶಿವಯೋಗಿಗಳಲ್ಲಿ ಅಂತರ್ಗತವಾಗಿ ಪ್ರತಿ ವರ್ತನೆಯಲ್ಲಿ ಹೊರಹೊಮ್ಮುತ್ತಿತ್ತು.

❖

## ನಾವು

ಮೂಲತಃ ನಾವೆಲ್ಲಾ ಪರಮಪ್ರಭುವಿಗೆ ಸಂಬಂಧ ಪಟ್ಟವರು. ಆದರೆ ಈಗ ನಮ್ಮನ್ನು ಲೌಕಿಕ ಕಾಲುಷ್ಯವು ಬಾಧಿಸುತ್ತಿದೆ. ಈ ಸ್ಥೂಲ ಶರೀರವು ಪ್ರಕೃತಿದತ್ತ ಗುಣಗಳಾದ ಸತ್ವ, ರಜಸ್, ತಮಸ್‌ಗಳಿಂದ ಕೂಡಿ ಕಾರ್ಯ ಮಾಡುವುದರ ಫಲ ಹಾಗೂ ಖಿಲವಾಗು ವುದೇ(ನಾಶ) ಇದರ ಹಣೆಬರಹ. ನಮ್ಮ 'ಆತ್ಮಕ್ಕೆ' ಜನನವಾಗಲಿ, ಮರಣವಾಗಲಿ ಇಲ್ಲ. ಅಷ್ಟೇ ಅಲ್ಲ, ಅದಕ್ಕೆ ಅಳಿವು ಎಂಬುದು ಎಂದಿಗೂ ಬರುವುದಿಲ್ಲ. ಆತ್ಮವು ಸತ್ಯ, ನಿರಂತರ, ಅಮರ. ನಾವು 'ಚೇತನಾತ್ಮರು' ಹಾಗಾಗಿ ನಿತ್ಯರೂ ಹೌದು.

ಅವಿನಾಶಿಯೂ ಅಳವಿಗೆ(ಅಳತೆಗೆ) ಸಿಗದವನು, ನಿತ್ಯನೂ ಆದ 'ಜೀವಿಯ' ಈ ಐಹಿಕ ಶರೀರವು ಮಾತ್ರ ನಾಶವಾಗುತ್ತದೆ. ಈ ಶರೀರಗಳಿಗೆ ಶೀತೋಷ್ಣ, ಸುಖ, ದುಃಖಗಳು ಕಾಣಿಸಿಕೊಂಡು ತಾತ್ಕಾಲಿಕ ವಾಗಿದ್ದು ಸ್ವಲ್ಪ ಸಮಯದ (ಕೆಲವು ವರ್ಷಗಳ) ಬಳಿಕ ಇಲ್ಲವಾಗುವುದು.

ತತ್ಕಾಲದ ಬದುಕು, ತತ್ಕಾಲದ ಸಂತೋಷ ಇಲ್ಲವೆ ಆನಂದ, ತತ್ಕಾಲದ ಸೌಕರ್ಯ ಮುಂತಾದವುಗಳಿಂದ ತೃಪ್ತರಾಗುವ ಜನರನ್ನು ಬುದ್ಧಿವಂತರೆಂದು ಪರಿಗಣಿಸ ಲಾಗದು. ಯಾವ ವ್ಯಕ್ತಿಯ ಮೆದುಳಿನಲ್ಲಿ ಕಡಿಮೆ ಸರಕಿದೆಯೋ, ಅಂತಹವನು 'ತತ್ಕಾಲದ ವಿಷಯ ಗಳಲ್ಲಿ ಮಾತ್ರ ಆಸಕ್ತನಾಗಿರುತ್ತಾನೆ' ಎಂದು ಭಗವದ್ಗೀತೆ ಹೇಳುತ್ತದೆ.

'ನಾವು' ಅಂದರೆ ದೇಹಗಳಲ್ಲ, ಪ್ರಜ್ಞಾವಂತ ಚೇತನಗಳು ಹೇಗೋ ಎಂತೋ ದೇಹವೆಂಬ ಒಂದು ಹೊದಿಕೆಯೊಳಗೆ ಸೇರಿಕೊಂಡುಬಿಟ್ಟಿದ್ದೇವೆ. ಈ ಚೇತನಾತ್ಮಗಳು ಶಾಶ್ವತವಾದ್ದರಿಂದ ಶಾಶ್ವತ 'ಧಾಮವೊಂದು' ಬೇಕೆಂದು ಬಯಸುವುದು ನಮ್ಮ ಸ್ವಭಾವಕ್ಕೆ ಸಹಜವಾಗಿಯೇ ಇದೆ. ಎಲ್ಲರ ಬದುಕಿನ ಹಂಬಲ ಇದು. ಆದರೆ ಎಷ್ಟು ಜನಕ್ಕೆ ಲಭ್ಯ? ಅವರವರ ಪ್ರಾಪ್ತ್ಯಾನುಸಾರ ಈ ಶಾಶ್ವತ ಧಾಮ ದೊರೆಯುತ್ತದೆ. ಇದನ್ನು ಕಂಡವರಿಲ್ಲ, ಕೇಳಿದವರಿಲ್ಲ. ಆದರೆ ಜನ ಜೀವಿಸುವ ರೀತಿಯಿಂದಲೇ ಅವರು ಸೇರಬಹುದಾದ ಧಾಮ ನಮಗೆ ಖಚಿತವಾಗುತ್ತದೆ. ಏಕೆಂದರೆ ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುತ್ತಾರೆ.

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ
ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ
ಕೂಡಲಸಂಗಮದೇವಾ.

–ಬಿ.ಎಚ್. ಗುರುಪ್ರಕಾಶ್





# ಶ್ರಾವಣ ಬಂತು ನಾಡಿಗೆ

–ಯು.ಎಸ್. ಸಂಗನಾಳಮಠ*

'ಶ್ರಾವಣ ಬಂತು ಕಾಡಿಗೆ, ಬಂತು ನಾಡಿಗೆ, ಬಂತು ಬೀಡಿಗೆ ಬಂತು ಶ್ರಾವಣಾ, ಓ ಬಂತು ಶ್ರಾವಣಾ' ಎಂದು ತಮ್ಮ ಕಂಚಿನ ಕಂಠದಿಂದ ಹಾಡುತ್ತಿದ್ದ ಸಿ.ಅಶ್ವತ್ಥ್ ನಮ್ಮ ಮಧ್ಯೆ ಇಲ್ಲ. ಕವನ ರಚಿಸಿದ ವರಕವಿಯೂ ಇಲ್ಲ. ಆದರೆ ಶ್ರಾವಣ ಮರಳಿ ಬರುತ್ತಲಿದೆ. ಆಷಾಢ ಮಾಸದಲಿ ಮರೆ ಯಾಗಿದ್ದ ಹಬ್ಬ-ಹರಿದಿನಗಳು ಮತ್ತು ಶುಭಕಾರ್ಯಗಳು ಶ್ರಾವಣ ಮಾಸ ಬರುತ್ತಲೇ ಸುನಾಮಿ ರೂಪದಲ್ಲಿ ಬರುತ್ತಲಿವೆ. ಸಾಲು ಸಾಲಾಗಿ ಹಬ್ಬಗಳು ಬರುತ್ತವೆ. ಆಷಾಢ ಎಂದರೆ ಖಿನ್ನತೆ, ದುಗುಡ, ಆಕಾಶವು ಮೋಡಗಳಿಂದ ಕೂಡಿದ್ದರೆ ಮಳೆ ಧೋ ಧೋ ಎಂದು ಸುರಿಯುತ್ತದೆ. ಎಲ್ಲ ಶಾಸ್ತ್ರ ಸಂಪ್ರದಾಯಗಳಿಗೂ ಕಡಿವಾಣ, ಹೊಸ ಜೋಡಿಗಳೂ ಸಹ ದೂರದೂರ.ಜೊತೆ-ಜೊತೆಯಾಗಿರಲು ಬಿಟ್ಟರೆ ಹೊರಗಿನ ಮಳೆಗೆ ಬೆಚ್ಚಗಾದರೆ ಹೊಸಕುಡಿ ಚಿಗುರೊಡೆದರೆ ಬಿರುಸಾದ ಬೇಸಿಗೆಯಲ್ಲಿ ಹೆರಿಗೆ ಆದರೆ ತ್ರಾಸದಾಯಕ ಎಂದು ಆಷಾಢದಲ್ಲಿ ಈ ಬೇರ್ಪಡೆ. ಆಷಾಢದ ಮಳೆಯ ಸಂದರ್ಭದಲ್ಲಿ ಕೃಷಿಕಾರ್ಯಗಳು ಸುಲಭವಾಗಿ ನಡೆಯುವುದರಿಂದ ಯಾವ ಶುಭಕಾರ್ಯ ಗಳಿಗೂ ನಿಷೇಧ ಇರಬಹುದು. ಆಗ ಹೊಸ ದಂಪತಿಗಳು ಪರಸ್ಪರ ನೆನಪಿನಲ್ಲಿ ಇರುಳುಗಳನ್ನು ಕಳೆದರೆ ಈಗ ದಂಪತಿ ಗಳು ಮೊಬೈಲ್ ಇರುವುದರಿಂದ ಮಾತಿಗೇನೂ ಬರವಿಲ್ಲ. ವಿರಹದ ಆಷಾಢ ಕಳೆಯಿತೆಂದರೆ ಶ್ರಾವಣದ ಸೋನೆ ಮಳೆಯಿದ್ದರೂ ಮೈಹದಗಟ್ಟಿ ಸಮಾಗಮಕ್ಕೆ ತೊಂದರೆಯಿಲ್ಲ ಹಲವು ಹಬ್ಬಗಳ ಸರಮಾಲೆ ಹೊರಗೆ 'ರಾವಣ ಕುಣಿದಾವ ಗಾಳಿ ಭೈರವನ ರೂಪತಾಳಿ' ಎಂದರೆ ಒಳಗೆ ವಿರಹದ ಬೇಗೆ ನೀಗಿ ಹಬ್ಬಗಳ ಸಂಭ್ರಮದ ಸಡಗರ.

ಸರಸ್ವತಿಯ ಉಪಾಸನೆಗೆ, ಶಿವಾರಾಧನೆಗೆ, ಲಕ್ಷ್ಮಿಯ ಸಾಕ್ಷಾತ್ಕಾರ ಬೇಕು. ಲಕ್ಷ್ಮಿಯನ್ನು ಪ್ರತಿದಿನ ಪ್ರತಿಗಳಿಗೆ ನೆನೆಯುವ ಮಾಸ ಶ್ರಾವಣ. ಪ್ರತಿ ಮಂಗಳವಾರ, ಶುಕ್ರ ವಾರ ಗೌರಿಹಬ್ಬ, ಗೌರಿಪೂಜೆ. ವೈಭವಲಕ್ಷ್ಮಿ ಸಹ ಪೂಜೆಗೊಳ್ಳುತ್ತಾಳೆ. ಶ್ರಾವಣದ ಎರಡನೇ ಶುಕ್ರವಾರ ವರಮಹಾಲಕ್ಷ್ಮೀವ್ರತ ಬಹಳ ಮಹತ್ವದ್ದು. ಸುಖಸಮೃದ್ಧಿ ತಮ್ಮ ಕುಟುಂಬಗಳಿಗೆ ಕರುಣಿಸುವ ಸಂಪತ್ತಿನ ದೇವತೆ ಲಕ್ಷ್ಮಿಯನ್ನು ಪ್ರಾರ್ಥಿಸುತ್ತಾರೆ. ಮಹಿಳೆಯರಿಗೆ ಎಡೆಬಿಡದ ಕಾರ್ಯಗಳು, ಬಾಗಿನ ಕೊಡುವುದು, ತೆಗೆದುಕೊಳ್ಳುವುದು, ಹರಿವನದಿ ಕಾಲುವೆಗಳಿಗೆ ಬಾಗಿನ ಸಮರ್ಪಣೆ, ಸಿಹಿ ತಿಂಡಿ ತಯಾರಿಕೆ. ಒಬ್ಬಟ್ಟು ನಿಪ್ಪಟ್ಟು ತಂಬಿಟ್ಟು ಮಾಡುವುದು. ಪಂಚಮಿ ಹಬ್ಬಕ್ಕೆ ವಿಧ ವಿಧವಾದ ಉಂಡಿಗಳನ್ನು ಮಾಡುವುದು ಎಂಬಿತ್ಯಾದಿ ನೂರೆಂಟು ಕಾರ್ಯಗಳು.

ಶ್ರಾವಣದ ಪ್ರತಿದಿನ ನಾನಾದೇವರಿಗೆ ಪೂಜೆ ಅರ್ಚನೆ. ಸೋಮವಾರ ಶಿವನಿಗೆ, ಮಂಗಳವಾರ ಮಂಗಳಗೌರಿ, ಬುಧವಾರ ಪಾಂಡುರಂಗವಿಠಲ, ಗುರುವಾರ ಗುರುಪೂಜೆ, ಶುಕ್ರವಾರ ಲಕ್ಷ್ಮಿ, ಶನಿವಾರ ಶನಿದೇವರು, ಭಾನುವಾರ ಸೂರ್ಯದೇವ ಹೀಗೆ ಪ್ರತಿದಿನ ಒಬ್ಬೊಬ್ಬ ದೇವರಿಗೆ ಮೀಸಲು. ಸ್ವಾಮೀಜಿಗಳ ಚಾತುರ್ಮಾಸ್ಯ ವ್ರತಾಚರಣೆ ಆರಂಭ.

ಶ್ರಾವಣದಲ್ಲಿ ಬರುವ ನಾಗರಪಂಚಮಿ ನಾಡ ಹೆಂಗಳೆಯರ ನಾಡಹಬ್ಬ. ಹಲವು ಆಚರಣೆಯೊಂದಿಗೆ ಮಕ್ಕಳಾಗುವುದಕ್ಕೂ ನಾಗಪೂಜೆ ಶ್ರೇಯಸ್ಕರ. ಮಕ್ಕಳಿಗೆ ಜೋಕಾಲಿ ಆಟ, ಚೆಂಡಾಟ, ಉಂಡಿ ತಿನ್ನುವುದು ಇವೆಲ್ಲ ಆಮೋದ, ಪ್ರಮೋದ, ತಾಯಿ-ಮಕ್ಕಳ, ಸಹೋದರ-ಸಹೋದರಿಯರ ಸಮ್ಮಿಲನವನ್ನು ಆನಂದವನ್ನು ಸವಿಯುವ ಸಂಭ್ರಮ ಮನೆಯ ಯಜಮಾನನದು.

ಪಂಚಮಿಯ ಮರುದಿನ ಸಿರಿಯಾಳಷಷ್ಠಿ ಎಂದು ಆಚರಿಸುತ್ತಾರೆ. ಸಿರಿಯಾಳಮ್ಮ ಹಲವು ಮಕ್ಕಳ ಸಿರಿಸಂಪತ್ತು. ಮಣ್ಣಿನ ಬೊಂಬೆಯ ಸಿರಿಯಾಳಮ್ಮ ಕಾಲುಚಾಚಿ ಕುಳಿತಿರು ತ್ತಾಳೆ. ಅವಳ ಮೊಳಕಾಲು, ಕಾಲುತುದಿ, ಹೊಟ್ಟೆ, ಹೆಗಲ ಮೇಲೆ ಪುಟ್ಟಪುಟ್ಟ ಮಕ್ಕಳ ಗೊಂಬೆಗಳು. ಸಂತಾನ ಸಿರಿ

* 'ಜ್ಯೋತಿರ್ಲಿಂಗ, ೧ನೇ ತಿರುವು, ಹೈಸ್ಕೂಲ್ ಬಡಾವಣೆ, ಶಿವಮೊಗ್ಗ ರಸ್ತೆ, ಹೊನ್ನಾಳಿ, ದಾವಣಗೆರೆ ಜಿಲ್ಲೆ.

ಯಾದ ಸಿರಿಯಾಳಮ್ಮನನ್ನು ಪೂಜಿಸಿದರೆ ಮಕ್ಕಳಾಗುತ್ತವೆ ಎಂಬ ನಂಬಿಕೆ ಇದೆ. ಸಂತಾನದ ಬೇಡಿಕೆಗೆ ಸಹ ಪೂಜೆ, ಮಕ್ಕಳ ಪೋಷಣೆಗೆ ಸಿರಿಯಾಳಮ್ಮ ಎಂಥ ಅದ್ಭುತ ಕಲ್ಪನೆ ಜನಪದರ ದೃಷ್ಟಿಯಲ್ಲಿ!

ಐಶ್ವರ್ಯದ ಅಧಿದೇವತೆಯಾದ ಲಕ್ಷ್ಮಿಯನ್ನು ಪೂಜಿಸುವ ಸಂಪ್ರದಾಯ ಭಾರತದ ದಕ್ಷಿಣಭಾಗದಲ್ಲಿ ಪ್ರಚಲಿತವಾಗಿದೆ. ಉತ್ತರ ಭಾರತದಲ್ಲಿ ದುರ್ಗಾಪೂಜೆಗೆ ಪ್ರಾಧಾನ್ಯತೆ ಇದೆ.

ಪ್ರತಿವರ್ಷ ಶ್ರಾವಣ ಶುದ್ಧ ಎರಡನೇ ಶುಕ್ರವಾರ ಅಥವಾ ಹುಣ್ಣಿಮೆಯ ಹಿಂದಿನ ಶುಕ್ರವಾರ ವರಮಹಾಲಕ್ಷ್ಮಿ ವ್ರತ ಆಚರಿಸುವರು. ಇದನ್ನು ಸಂಪತ್‌ಲಕ್ಷ್ಮಿ ಶುಕ್ರವಾರ ಎನ್ನುವರು.

**'ಶುಕ್ಲೇ ಶ್ರಾವಣ ಮಾಸೇ ಪೂರ್ಣಿಮಾಪಾಂತ್ಯ ಭಾರ್ಗವೇ ವರಲಕ್ಷ್ಮ್ಯಾಮ್‌ವ್ರತಂ ಕಾರ್ಯಾ ಸಿದ್ಧಿರಸ್ತು'** ಎಂಬ ವಾಕ್ಯದ ಪ್ರಕಾರ ಈ ವ್ರತ ಸಾಂಗವಾಗುತ್ತದೆ. ಶುಕ್ರಗ್ರಹ ಫಲವತ್ತತೆಯ ಸಂಕೇತ. ಅದಕ್ಕೆ ಶುಕ್ರವಾರದ ಪೂಜೆ ಫಲಪ್ರದ.

ಈ ವ್ರತವನ್ನು ಹೆಣ್ಣುಮಕ್ಕಳೇ ಆಚರಿಸುತ್ತಾರೆ. ಮನೆಯ ಮುಂದೆ ರಂಗವಲ್ಲಿ ಹಾಕಿ, ಮನೆಯ ಬಾಗಿಲಿಗೆ ಹಸಿರು ತೋರಣ ಕಟ್ಟಿದಾಗ ಹಬ್ಬಕ್ಕೆ ನಾಂದಿ. ಅಭ್ಯಂಜನ ಮುಗಿಸಿ ಹೊಸ ವಸ್ತ್ರಗಳನ್ನು ಧರಿಸಿದ ಸುಮಂಗಲೆಯರು ಪೂಜಾ ಕೊಠಡಿಯಲ್ಲಿ ರಂಗವಲ್ಲಿ ಹಾಕಿ, ಅಕ್ಕಿಯ ಮೇಲೆ ಅರಿಶಿಣ ಹುಡಿ ಹಾಕಿ, ನೀರು ಅಥವಾ ಅಕ್ಕಿತುಂಬಿದ ಕಲಶವನ್ನು ಇಟ್ಟು ಅದರ ಮೇಲೆ ತೆಂಗಿನಕಾಯಿ ಇರಿಸಿ ಸುತ್ತಲೂ ವೀಳ್ಯೆದೆಲೆ ಪ್ರಭಾವಳಿ ಮಾಡಿ ಅದಕ್ಕೆ ಲಕ್ಷ್ಮಿಯ ಮುಖವಾಡ ಇರಿಸಿ, ಅದಕ್ಕೆ ಚೆಂದವಾದ ಜರತಾರಿಯ ಅಂಚು ಸೆರಗು ಇರುವ ಸೀರೆ ಉಡಿಸಿ, ನಂತರ ಕಲಶವನ್ನು ದೀಪ, ಧೂಪ ಗಳಿಂದ ಪೂಜಿಸಿ ಬೆಳಗುತ್ತಾರೆ. ಸುಮಧುರ ವಾಸನೆ ಭರಿತ ಸಂಪಿಗೆ, ಮಲ್ಲಿಗೆ ಸೇವಂತಿಗೆಗಳಿಂದ ಅಲಂಕರಿಸುತ್ತಾರೆ. ಹಣ್ಣುಹಂಪಲು, ಸಿಹಿತಿಂಡಿಗಳನ್ನು ನೈವೇದ್ಯ ಮಾಡುತ್ತಾರೆ. ಆ ದಿನ ಮುತ್ತೈದೆಯರನ್ನು ಆಮಂತ್ರಿಸಿ ಉಡಿ ತುಂಬಿ ಬಾಗಿನವನ್ನು ಸಮರ್ಪಿಸುತ್ತಾರೆ.

ಲಕ್ಷ್ಮಿ ಅನುಗ್ರಹವಾದರೆ ಮನೆಯಲ್ಲಿ ಧನಲಕ್ಷ್ಮಿ, ಧಾನ್ಯ ಲಕ್ಷ್ಮಿ, ಸೌಭಾಗ್ಯಲಕ್ಷ್ಮಿ, ಸಂತಾನಲಕ್ಷ್ಮಿ, ವಿದ್ಯಾಲಕ್ಷ್ಮಿ, ವಿಜಯ ಲಕ್ಷ್ಮಿ, ಕೀರ್ತಿಲಕ್ಷ್ಮಿ, ಮೋಕ್ಷಲಕ್ಷ್ಮಿ ಹೀಗೆ ಅಷ್ಟಲಕ್ಷ್ಮಿಗಳು ನೆಲೆಸುತ್ತಾರೆ.

ಪಾರ್ವತಿಯ ಕೋರಿಕೆಯಂತೆ ಪರಮೇಶ್ವರನು ವರ ಮಹಾಲಕ್ಷ್ಮಿ ವ್ರತದ ಬಗ್ಗೆ ಈ ರೀತಿ ಹೇಳುತ್ತಾನೆ ಎಂದು ಭವಿಷ್ಯೋತ್ತರ ಪುರಾಣದಲ್ಲಿ ಉಲ್ಲೇಖವಾಗಿದೆ. 'ವಿದರ್ಭ ದೇಶದ ಕುಂಡಿನಿ ಪಟ್ಟಣದಲ್ಲಿ ಚಾರುಮತಿ ಎಂಬ ಬಡ ಬ್ರಾಹ್ಮಣ ಸ್ತ್ರೀ ಇದ್ದಳು ಅವಳು ಪತಿವ್ರತೆ. ಕಡು ಬಡತನ ಅತ್ತೆ ಮಾವಂದಿರ ಸೇವಾ ನಿರತಳು. ಇವಳ ಸ್ವಭಾವಕ್ಕೆ ಲಕ್ಷ್ಮಿ ಸ್ವಪ್ನದಲ್ಲಿ ಬಂದು 'ನಿನಗೆ ಶುಭ ಉಂಟುಮಾಡಲು ಶ್ರಾವಣ ಎರಡನೆ ಶುಕ್ರವಾರದಂದು ವರಮಹಾಲಕ್ಷ್ಮಿ ವ್ರತ ಮಾಡಲು ಹೇಳಿ ಪೂಜಾವಿಧಿವಿಧಾನಗಳನ್ನು ಹೇಳಿದಳು. ಆಗ ಚಾರುಮತಿ ತನ್ನ ಬಂಧು-ಬಾಂಧವರೊಂದಿಗೆ ಪೂಜಾ ವ್ರತ ಪೂರೈಸಿದಳು. ಈ ವ್ರತಪೂಜೆ ಫಲವಾಗಿ ಚಾರುಮತಿ ಯಾದಿ ಪೂಜೆಯಲ್ಲಿ ಪಾಲ್ಗೊಂಡವರಿಗೆ ಸಕಲ ಸಂಪತ್ತು ಪ್ರಾಪ್ತವಾಯಿತು. ಇದು ಪೌರಾಣಿಕ ಐತಿಹ್ಯ.

ಹೀಗೆ ಮಾತೃಪೂಜೆಯ ಈ ನಾಡಿನಲ್ಲಿ ಶ್ರೀಲಕ್ಷ್ಮಿ ವಿಷ್ಣುವಿನ ಶಕ್ತಿಯಾಗಿ ಅವನಲ್ಲಿರುವ ಶ್ರೀ, ಭೂ, ಸರಸ್ವತಿ, ಕೀರ್ತಿ, ಕಾಂತಿ, ತುಷ್ಟಿ-ಪುಷ್ಟಿಗಳ ಪ್ರತೀಕವಾಗಿದ್ದಾಳೆ. ಅಂಥ ಲಕ್ಷ್ಮಿಯನ್ನು ಆರಾಧಿಸಿ ಮನೆಯಲ್ಲಿ ಧನಕನಕ ಐಶ್ವರ್ಯ ಗಳು ನೆಲೆಗೊಳ್ಳುವಂತೆ ಬೇಡಿಕೊಳ್ಳುವುದೇ ವರಮಹಾಲಕ್ಷ್ಮಿ ವ್ರತದ ವಿಶಿಷ್ಟತೆ ಎನ್ನಬಹುದು.

ಗಣೇಶನ ಹಬ್ಬ, ಕೃಷ್ಣಜನ್ಮಾಷ್ಟಮಿ, ರಕ್ಷಾಬಂಧನ, ನವರಾತ್ರಿ ದೀಪಾವಳಿ ಹೀಗೆ ಹಲವು ಹಬ್ಬಗಳಿಗೆ ನಾಂದಿ ಈ ಶ್ರಾವಣ ಮಾಸ.

'ಶ್ರಾವಣಮಾಸ ಬಂದಾಗ ಆನಂದ ತಂದಾಗ ವಿರಹ ಗೀತೆ ಇಲ್ಲಿಲ್ಲ ಪ್ರಣಯ ಗೀತೆ ಬಾಳೆಲ್ಲ' ಎಂಬ ಡಾ॥ ರಾಜ ಕುಮಾರರ ಹಾಡು; 'ಸಾವನ್ ಕಾ ಮಹಿನಾ ಪವನ್ ಕರೆ ಶೋರ್' ಎಂಬ ಹಳೆಯ 'ಮಿಲನ್' ಸಿನಿಮಾ ಗೀತೆ; 'ಆಯಾ ಸಾವನ್ ಝುಮ್‌ಕೆ' ಎಂಬ ಚಲನಚಿತ್ರ ನೆನಪಾಗುತ್ತದೆ.

ಶ್ರಾವಣದ ಸೋನೆಯಲ್ಲಿ, ಗಾಳಿಯ ಸುಳಿಯಲ್ಲಿ ಮನಸ್ಸು ನವಿಲಿನಂತೆ ನರ್ತಿಸುತ್ತದೆ. ನಿಸರ್ಗ ನಳನಳಿಸುತ್ತ ಹಸುರಿನ ಸಿರಿಯು ನಮಗೆಲ್ಲ ಕಣ್ಣಿಗೆ ತಂಪನ್ನು ಮನಸ್ಸಿಗೆ ಆನಂದವನ್ನು ಕೊಡುತ್ತದೆ.





## ನಾಗಲಾಂಬಿಕೆ

* – ಪ್ರೊ. ಕೆ. ಓಂಕಾರಪ್ಪ

ಬಿಜಾಪುರ ಜಿಲ್ಲೆ ಬಾಗೇವಾಡಿ ಅಗ್ರಹಾರದ ಶೈವ ಬ್ರಾಹ್ಮಣ ದಂಪತಿಗಳಾದ ಮಾದರಸ ಮತ್ತು ಮಾದಲಾಂಬಿಕೆ ಯರು ನಾಗಲಾಂಬಿಕೆಯ ತಂದೆ ತಾಯಿಯರು. ಬಸವಣ್ಣ ನವರಿಗೆ ಅಕ್ಕನಾಗಮ್ಮ ಅಕ್ಕನಾಗಬೇಕೋ? ತಂಗಿಯಾಗ ಬೇಕೋ? ಈ ಚರ್ಚೆ ನಡೆಯುತ್ತಲೇ ಇದ್ದು; ನಾಗಲಾಂಬಿಕೆ ಬಸವಣ್ಣನವರ ಅಕ್ಕನೆಂದೇ ಇಂದೂ ಕೂಡ ಬಿಂಬಿತ ವಾಗುತ್ತಿದೆ. ಈ ಕುರಿತು ಡಾ॥ ವೀರಣ್ಣ ರಾಜೂರ ಅವರು ನಾಗಲಾಂಬಿಕೆ ಬಸವಣ್ಣನವರ ಅಕ್ಕನಲ್ಲ ತಂಗಿಯೆಂದು ಒಂದೆರಡು ಕೃತಿಗಳಲ್ಲಿಯ ಆಧಾರದ ಮೇಲೆ ತಮ್ಮ ವಾದವನ್ನು ಮಂಡಿಸಿದ್ದಾರೆ. ಚೆನ್ನಬಸವಣ್ಣನವರ ತಾಯಿಯಾದ ನಾಗಲಾಂಬಿಕೆಯನ್ನು ಬಸವಣ್ಣನ ಅಕ್ಕನೆಂದು ಈವರೆಗೆ ವಿದ್ವಾಂಸರು ಭಾವಿಸುತ್ತಾ ಬಂದಿದ್ದಾರೆ. ಆದರೆ ಇವಳನ್ನು ಪ್ರಸ್ತಾಪಿಸುವ ಪ್ರಥಮ ಕೃತಿಯಾದ ಭೀಮಕವಿಯ ಬಸವಪುರಾಣದಲ್ಲಿ ಇವಳನ್ನು ಬಸವಣ್ಣನವರ ತಂಗಿಯೆಂದು ಸ್ಪಷ್ಟವಾಗಿಯೇ ತಿಳಿಸಲಾಗಿದೆ. ಬಸವಣ್ಣನವರು ಬಾಗೇವಾಡಿ ಯಿಂದ ಹೊರಟ ಸಂದರ್ಭವನ್ನು ಚಿತ್ರಿಸುತ್ತಾ **'ತನ್ನನುಜೆ ನಾಗಲಾದೇವಿಯು ನಿಜಸತಿಯು ಗಂಗಾದೇವಿಯುಂ ಸಹಿತ'** ಸಂಗಮಕ್ಕೆ ತೆರಳಿದನೆಂದು ತಿಳಿಸಲಾಗಿದೆ. ಇದರಿಂದ ನಾಗ ಲಾಂಬಿಕೆ ಬಸವಣ್ಣನ ಅಕ್ಕನಲ್ಲ ತಂಗಿಯೆಂದು ಸ್ಪಷ್ಟವಾಗುತ್ತದೆ.

ಈ ತರುವಾಯ ಬಂದ ಇನ್ನೊಂದು ಮುಖ್ಯಕೃತಿ ಯಾದ ಪ್ರಸಾದಿ ಮಹದೇವಯ್ಯನವರ ಶೂನ್ಯಸಂಪಾದನೆಯು 'ತನ್ನಿಂ ಕಿರಿಯಳಾದ ನಾಗಲಾಂಬಿಕೆಯೊಂದಿಗೆ' ಬಸವಣ್ಣ ನವರು ಕೂಡಲಸಂಗಮಕ್ಕೆ ಹೋದರೆಂದು ಹೇಳುತ್ತಾ ಭೀಮಕವಿಯ ಅಭಿಪ್ರಾಯವನ್ನು ಅನುಮೋದಿಸುತ್ತದೆ. ಆದರೆ ಆ ಬಳಿಕ ಲಕ್ಕಣ್ಣ ದಂಡೇಶ, ಸಿಂಗಿರಾಜ ಮೊದಲಾದ ಕವಿಗಳು ಅವಳ ಹೆಸರಿಗೆ ಗೌರವ ಸೂಚಿಸಿ ವಿಶೇಷಣ ವಾಗಿರುವ 'ಅಕ್ಕ' ಎಂಬುದನ್ನು ವಾಚ್ಯಾರ್ಥದಲ್ಲಿಯೇ ಸ್ವೀಕರಿಸಿ ಅವಳನ್ನು ಬಸವಣ್ಣನವರ ಅಕ್ಕ ಎಂದೇ ಚಿತ್ರಿಸಿದರು. ಇದೆಲ್ಲವನ್ನು ನೋಡಿದರೆ ನಾಗಲಾಂಬಿಕೆ

*ಎನಗೆ ಹಾಲೂಟವನ್ನಿಕ್ಕುವ ತಾಯೆ, ಪರಮಸುಖ*
*ದೊಳಗಿಪ್ಪ ತಾಯೆ*
*ಪರವಸ್ತುವ ನಂಬಿದ ತಾಯೆ, ಬಸವನ ಗುರುತಾಯೆ*
*ಸಂಗಯ್ಯನಲ್ಲಿ ಸ್ವಲಿಂಗಯಾದೆಯಾ, ಅಕ್ಕನಾಗಮ್ಮ ತಾಯೆ!*

ಅಕ್ಕಮ್ಮ, ಅಕ್ಕನಾಗಮ್ಮ, ನಾಗಲಾದೇವಿ ಈ ಹೆಸರು ಗಳಿಂದ ಶರಣ ತಿಂತಿಣಿಯಲ್ಲಿ ಪ್ರಸಿದ್ಧಳಾಗಿದ್ದ ನಾಗಲಾಂಬಿಕೆಯ ಘನ ವ್ಯಕ್ತಿತ್ವದ ಎತ್ತರ-ಬಿತ್ತರಗಳು ಬಸವಣ್ಣನವರ ಮಡದಿ ನೀಲಮ್ಮನವರ ಈ ವಚನದಲ್ಲಿ ಅನಾವರಣಗೊಂಡಿವೆ. ಅಕ್ಕನಾಗಮ್ಮನ ಆಧ್ಯಾತ್ಮಿಕ ಮುಖವನ್ನು ನೀಲಮ್ಮ ಅತ್ಯಂತ ಸೊಗಸಾಗಿ ಈ ವಚನದಲ್ಲಿ ಕಟ್ಟಿಕೊಟ್ಟಿದ್ದಾಳೆ. ನಾದಿನಿಯ ಬಗೆಗಿರುವ ನೀಲಮ್ಮನ ಮಧುರಭಾವ ಇಲ್ಲಿ ಆತ್ಮೀಯವಾಗಿ ನಿರೂಪಿತವಾಗಿದೆ. ನಾಗಲಾಂಬಿಕೆ ನೀಲಮ್ಮನಿಗೆ ಲೌಕಿಕ ಸಂಬಂಧದ ನಾದಿನಿ ಮಾತ್ರವಾಗಿರದೆ ವಿಚಾರದ ಹಾಲೂಟ ವನ್ನಿಕ್ಕುವ, ಮುಕ್ತಿ ಮಾರ್ಗ ತೋರುವ, ಭಗವಂತನನ್ನು ನಂಬಿ ಪರಮಾನಂದದಲ್ಲಿರುವ ತಾಯಾಗಿ ಕಂಡಿದ್ದಾಳೆ. ಬಸವನಿಗೆ ಗುರುವಾಗಿ ಸಾಧನೆಯ ಎತ್ತರಕ್ಕೆ ಏರಿ ತಾನೇ ಲಿಂಗವಾದ ಪರಿಯನ್ನು ಹೇಳುವುದರ ಜೊತೆಗೆ ತನ್ನ ಆಧ್ಯಾತ್ಮಿಕ ಶಕ್ತಿಯಿಂದ ತನಗೂ ಅಕ್ಕನಾಗಿ, ತಾಯಿಯಾಗಿ ಮಾರ್ಗದರ್ಶನ ಮಾಡಿದ್ದನ್ನು ನೀಲಮ್ಮ ಇಲ್ಲಿ ಸ್ಮರಿಸಿ ಕೊಂಡಿದ್ದಾಳೆ. ನಾಗಲಾಂಬಿಕೆಯೊಂದಿಗೆ ನೀಲಮ್ಮನಿಗಿರುವ ಸಂಬಂಧವನ್ನು ಗಮನಿಸಿದಾಗ ವಚನ ಚಳುವಳಿಯಲ್ಲಿ ಸಂಬಂಧ ವಾಚಕಗಳು ಲೌಕಿಕವಾಗಿ ಕಾಣುವ ಸಂಬಂಧ ಕ್ಕಿಂತ ಭಿನ್ನವಾಗಿ ವ್ಯಕ್ತಿತ್ವದ ಎತ್ತರದ ಹಿನ್ನಲೆಯಲ್ಲಿ ಆತ್ಮೀಯ ಗೌರವ ಸೂಚಕ ಶಬ್ದಗಳಾಗಿ ಕಾಣಿಸುತ್ತವೆ. ಅಣ್ಣ ಬಸವಣ್ಣ, ಅಕ್ಕಮಹಾದೇವಿ, ಅಕ್ಕನಾಗಮ್ಮ, ಚೆನ್ನಬಸವಣ್ಣ, ಅಪ್ಪ ಮಾದಾರ ಚೆನ್ನ, ಬೊಪ್ಪ ಡೋಹರ ಕಕ್ಕ ಮುಂತಾದ ಸಂಬಂಧವಾಚಕಗಳನ್ನು ಇಲ್ಲಿ ಗಮನಿಸಬಹುದು. ತನ್ನ ಬದುಕಿಗೆ ಸದಾ ಮಾರ್ಗದರ್ಶನ ನೀಡುತ್ತಿದ್ದ ನಾಗಲಾಂಬಿಕೆ ಸಂಗಯ್ಯನಲ್ಲಿ ಒಂದಾದಾಗ ಅವಳ ಅಗಲಿಕೆಯ ನೋವನ್ನು ನೀಲಮ್ಮ ಇಲ್ಲಿ ನಿವೇದಿಸಿಕೊಂಡಿದ್ದಿರಬಹುದು.

* ಕನ್ನಡ ಪ್ರಾಧ್ಯಾಪಕರು, 'ಶ್ರೀ ಕಲ್ಲೇಶ್ವರ', 5ನೇ ಕ್ರಾಸ್, ಬಸವೇಶ್ವರ ನಗರ, ಶಿವಮೊಗ್ಗ-04.

ಬಸವಣ್ಣನವರ ಅಕ್ಕನಲ್ಲ ತಂಗಿಯೆಂದು ಸ್ಪಷ್ಟವಾಗುತ್ತದೆ.

ಇಷ್ಟಾದರೂ ಕೆಲವು ಸಂಶಯಗಳು ನಮಗೆ ಎದುರಾಗುತ್ತವೆ. ಬಸವಣ್ಣನವರ ಉಪನಯನ ಸಂದರ್ಭದಲ್ಲಿ ಧಾರ್ಮಿಕ ಲಾಂಛನವಾದ ಯಜ್ಞೋಪವೀತವನ್ನು ನಾಗಲಾಂಬಿಕೆಗೆ ಧಾರಣ ಮಾಡಲು ಧರ್ಮಜಡರು ವಿರೋಧಿಸಿದಾಗ; ಹೆಣ್ಣು ಧಾರ್ಮಿಕ ಲಾಂಛನ ಧರಿಸಲು ಅನರ್ಹಳೆಂಬ ಮೂಲಭೂತವಾದಿಗಳ ಶೋಷಣೆಯನ್ನು ಬಸವಣ್ಣನವರು ಧಿಕ್ಕರಿಸಿ ಕೂಡಲಸಂಗಮಕ್ಕೆ ಬಂದರೆಂದು ಭಾವಿಸಬಹುದಾದರೂ, ನಾಗಲಾಂಬಿಕೆಗೆ ಜನಿವಾರ ಧರಿಸಲು ಅವಕಾಶನೀಡದ ಸಂದರ್ಭವನ್ನು ಗಮನಿಸಿದಾಗ ನಾಗಲಾಂಬಿಕೆ ಬಸವಣ್ಣನವರ ತಂಗಿಯಾಗಿರದೆ ಅಕ್ಕನಾಗಿರಬಹುದೆಂದು ಭಾವಿಸಬೇಕಾಗುತ್ತದೆ. ಬಹುಶಃ ತಂಗಿಯಾಗಿದ್ದರೆ ಪ್ರಶ್ನಿಸಲು ಸಾಧ್ಯವಿರಲಿಲ್ಲವೆನ್ನಿಸದಿರದು. ಬಸವಣ್ಣ ತನ್ನ ಹೆಂಡತಿ ಗಂಗಾಂಬಿಕೆಯನ್ನು ತನ್ನ ಸಂಗಡ ಕೂಡಲ ಸಂಗಮಕ್ಕೆ ಕರೆದುಕೊಂಡು ಹೋದನೆಂದು ತಿಳಿಯುವುದಾದಲ್ಲಿ ಬಸವಣ್ಣನವರಿಗೆ ಆ ಹೊತ್ತಿಗಾಗಲೇ ಮದುವೆಯಾಗಿತ್ತೆಂಬ ಭೀಮಕವಿಯ ಹೇಳಿಕೆ ಸತ್ಯಕ್ಕೆ ದೂರವಾಗುತ್ತದೆ. ಇಷ್ಟಾದರೂ ನಾಗಲಾಂಬಿಕೆ ಬಸವಣ್ಣನವರ ಸಂಗಡ ಕೂಡಲಸಂಗಮಕ್ಕೆ ಬಂದಳೆ? ಅಥವಾ ನಂತರ ಸೇರಿಕೊಂಡಳೆ? ಈ ಕುರಿತಂತೆ ಯಾರ ಖಚಿತ ಆಧಾರಗಳು ದೊರೆಯುವುದಿಲ್ಲ. ನಾಗಲಾಂಬಿಕೆಯ ಯೋಗಸಾಧನೆಯ ತಾಣ ಇಂಗಳೇಶ್ವರವೇ? ಕೂಡಲಸಂಗಮವೆ? ಇದು ಕೂಡ ಅನುಮಾನಕ್ಕೆಡೆಮಾಡಿ ಕೊಡುತ್ತದೆ.

ಸಂಸಾರದಲ್ಲಿದ್ದುಕೊಂಡೇ ನಾಗಲಾಂಬಿಕೆ ಪಾರಮಾರ್ಥಿಕ ಚಿಂತನೆ ನಡೆಸಿರಬೇಕು. 'ಹೆಣ್ಣಬಿಟ್ಟು' ಲಿಂಗವನೊಲಿಸಬೇಕೆಂಬರು, ಲಿಂಗಕ್ಕೆಯೂ ಹೆಣ್ಣಿಗೂ ವಿರುದ್ಧವೇ? ಇದು ಗಜೇಶ ಮಸಣಯ್ಯ ಅವರ ಪುಣ್ಯಸ್ತ್ರೀ ನಿಲವು. ಶರಣೆಯರ ಆದರ್ಶವನ್ನು ನಾಗಲಾಂಬಿಕೆ ಅಕ್ಷರಶಃ ಪಾಲಿಸಿರುವಲ್ಲಿ ಅವಳ ಅತಿಶಯತೆ ಇದೆ. ನಾಗಲಾಂಬಿಕೆಯ ಪತಿ ಶಿವದೇವನೆಂದು ೧೬ನೆಯ ಶತಮಾನದ ಸಿಂಗಿರಾಜ ಪುರಾಣ ಹೇಳುತ್ತದೆ. ಆದರೆ ಶಿವದೇವನ ಸ್ಥಳ ಯಾವುದು? ನಾಗಲಾಂಬಿಕೆಯನ್ನು ಶಿವದೇವ ಮದುವೆಯಾದದ್ದು ಯಾವಾಗ? ಅವನ ಸ್ಥಳ ಇಂಗಳೇಶ್ವರವೇ? ಕೂಡಲ ಸಂಗಮಕ್ಕೆ ಬಸವಣ್ಣನವರು ಹೊರಟ ಸಂದರ್ಭದಲ್ಲಿ ಆಕೆಗೆ ಶಿವದೇವನೊಡನೆ ವಿವಾಹವಾಗಿತ್ತೆ? ಶಿವದೇವ ನಾಗಲಾಂಬಿಕೆಯೊಡನೆ ಕೂಡಲಸಂಗಮಕ್ಕೆ ಹೋದನೇ? ಇದಾವುದಕ್ಕೂ ಸಮರ್ಪಕವಾದ ಉತ್ತರ ಸಿಗುವುದಿಲ್ಲ.

ನಾಗಲಾಂಬಿಕೆಯ ಬಾಲ್ಯ, ದಾಂಪತ್ಯ ಜೀವನ ಕುರಿತಂತೆ ಇರುವ ತೊಡಕಿನಂತೆಯೇ ಚೆನ್ನಬಸವಣ್ಣನವರ ಜನನ ವಿಚಾರ ಕೂಡ ಕಗ್ಗಂಟಾಗಿಯೇ ಉಳಿದಿದೆ. ಅವಿವಾಹಿತ ಕನ್ಯೆಯಾಗಿದ್ದ ನಾಗಲಾಂಬಿಕೆಗೆ ಬಸವಣ್ಣ ತಂದುಕೊಟ್ಟ ಕಕ್ಕಯ್ಯನ ಮನೆಯ ಮಿಕ್ಕ ಪ್ರಸಾದ ಸೇವಿಸಲು ಚೆನ್ನಬಸವಣ್ಣ ಹುಟ್ಟಿದನೆಂದು ಕೆಲವು ವೀರಶೈವ ಪುರಾಣಗಳು ಚಿತ್ರಿಸಿವೆ. ಶರಣ ಚಳುವಳಿಯ ಮೂಲ ಆಶಯಕ್ಕೆ ಭಂಗತರುವ ವಿಷಯವಿದು. 'ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ' ಎಂದು ನಿಸರ್ಗದತ್ತ ಕ್ರಿಯೆಗೆ ಇಂಬು ಕೊಟ್ಟ ಬಸವಣ್ಣನವರಿಗೆ ಇದು ಒಪ್ಪಿಗೆಯಾದೀತೇ? ವಿಚಾರ ಮಾಡಬೇಕಿದೆ. ಹಿರಿಯರಾದೊಡೇನು? ಕಿರಿಯರಾದೊಡೇನು? ಅರಿವಿಂಗೆ ಹಿರಿದು-ಕಿರಿದುಂಟೆ? ಎಂದು ಅಲ್ಲಮರಿಂದ ಶ್ಲಾಘನೆಗೆ ಪಾತ್ರವಾಗಿದ್ದ ಚೆನ್ನಬಸವಣ್ಣನವರು; ಬಸವಣ್ಣನವರ ಉದಾರಪರ ನಿಲವಿನಿಂದ ಮಹಾಮನೆಯಲ್ಲಿ ತುಂಬಿಕೊಂಡಿದ್ದ ಅನೇಕ ಸಮಯಗಳ್ಳರಿಗೆ ಒಂದು ನಿಶ್ಚಿತ ಚೌಕಟ್ಟನ್ನು ಷಟ್ಸ್ಥಲ ಸಿದ್ಧಾಂತದ ಮೂಲಕ ಹಾಕಿ ಕೊಟ್ಟ ಜ್ಞಾನಮೂರ್ತಿ ಚೆನ್ನಬಸವಣ್ಣನವರಿಗೆ ಈ ಬಗೆಯಲ್ಲಿ ಆರೋಪಿಸುವುದು ಸರಿಯೆ? ಬಸವಾದಿ ಶರಣರ ಪ್ರಗತಿಪರ ಚಿಂತನೆಗೆ, ಅನುಭವ ಮಂಟಪದ ಕಾರ್ಯಕ್ಷಮತೆಗೆ ಮನಸೋತು ಕೇರಳ ಮಾಳವರಿಂದ ಬಂದ ಕಕ್ಕಯ್ಯನ ಮನೆಯ ಮಿಕ್ಕಿದ ಪ್ರಸಾದ ನಾಗಲಾಂಬಿಕೆಗೆ ದಕ್ಕಿದ್ದಾದರೂ ಹೇಗೆ? ಇವೆಲ್ಲ ತಳಬುಡವಿಲ್ಲದ ಅತಿರೇಕದ ಸಂಗತಿಗಳಾಗಿ; ಶರಣರ ವಾಸ್ತವಿಕ ನಿಲವನ್ನು ವೈಭವೀಕರಿಸಿ ಹೇಳಿ ಮಾನವತ್ವಕ್ಕೆ ಮಸಿಬಳಿಯುವ ಸಂಗತಿಗಳೆಂದೇ ತಿಳಿಯಬೇಕಾಗುತ್ತದೆ.

ಚೆನ್ನಬಸವಣ್ಣ, ನಾಗಲಾಂಬಿಕೆ ಬದುಕನ್ನು ತಿಳಿಯುವಲ್ಲಿ ತತ್ಕಾಲದ ಯಾವ ಕವಿಯೂ ಅವರನ್ನು ಮುಖ್ಯವಾಗಿಟ್ಟುಕೊಂಡು ಕೃತಿ ರಚಿಸದಿರುವುದು; ವಚನ ಹಾಗೂ ಇನ್ನಿತರ ಕೃತಿಗಳಲ್ಲಿ ಬರುವ ಉಲ್ಲೇಖಗಳನ್ನು ಗಮನಿಸಿ ಚೆನ್ನಬಸವಣ್ಣನವರ ತಂದೆ, ಜನ್ಮಸಂಗತಿ ತಿಳಿಯಬೇಕಾದ





ಅನಿವಾರ್ಯತೆಯಲ್ಲಿ ಇಷ್ಟೆಲ್ಲ ಅನರ್ಥಕ್ಕೆ ಕಾರಣವಾಗಿದೆ. ತಡವಾಗಿಯಾದರೂ ೧೬ನೆಯ ಶತಮಾನದಲ್ಲಿ ಬಂದ ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣ ಕೂಡ ಪ್ರಸಾದದ ಮಹಿಮೆಯಿಂದಲೇ ಚೆನ್ನಬಸವಣ್ಣ ಹುಟ್ಟಿದನೆಂದು ಹೇಳಿ 'ಪುರಾಣಪುಂಡರ ಗೋಷ್ಠಿ' ನ್ಯಾಯವೊದಗಿಸಿ ಕೈತೊಳೆದುಕೊಂಡಿದೆ. ಇದೇ ಶತಮಾನದ ಸಿಂಗಿರಾಜ ಪುರಾಣ ಹೇಳುವಂತೆ ಶಿವದೇವ ಚೆನ್ನಬಸವಣ್ಣನವರ ತಂದೆಯಾಗಿದ್ದು; ಸಂಸಾರದ ನಿಸ್ಸಂಗತ್ವದ ಕಾರಣದಿಂದಾಗಿ ಸಂಸಾರದಿಂದ ದೂರವಾಗಿರಬಹುದು. ತನ್ನ ತಾತ್ತ್ವಿಕ ಭಿನ್ನಾಭಿಪ್ರಾಯದಿಂದಲೋ ಅಥವಾ ೧೨ನೆಯ ಶತಮಾನದಲ್ಲಿ ಹೆಣ್ಣಿಗೆ ದೊರೆತ ಉದಾರಪರ ನಿಲವಿನಿಂದಲೋ ಹೆಂಡತಿ ನಾಗಲಾಂಬಿಕೆ ಮಗ ಚೆನ್ನಬಸವಣ್ಣನನ್ನು ನಿಜಧರ್ಮಪರವಾದ ಚಿಂತನೆಗೆ, ಸಮಾಜ ಸೇವೆಗೆ, ಶರಣ ಚಳುವಳಿ ಯಶಸ್ವಿಯಾಗುವಲ್ಲಿ ಭಾಗವಹಿಸಲು ಕಳುಹಿಸಿ ಕೊಟ್ಟಿರಬೇಕು.

ನಿಜದ ನಿಲವನ್ನು ತಿಳಿಯಲು ಕೆಲವು ಸಂಗತಿಗಳಿಗೆ ತೊಡಕಾಗಿದ್ದರೂ ನಾಗಲಾಂಬಿಕೆ ಕಲ್ಯಾಣದಲ್ಲಿ ನೆಲೆ ನಿಂತು; ಅನುಭವ ಮಂಟಪ ಚರ್ಚೆಯಲ್ಲಿ ಭಾಗವಹಿಸಿ ತನ್ನ ಅಭಿಪ್ರಾಯವನ್ನು ಮುಕ್ತವಾಗಿ ವ್ಯಕ್ತಪಡಿಸಿರುವುದರಲ್ಲಿ ಯಾರೂ ಅನುಮಾನ ಪಡಬೇಕಾಗಿಲ್ಲ. ಬಸವಣ್ಣನವರ ಮಹಾಮನೆಯಲ್ಲಿ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಶರಣರಿಗೆ ಬಸವಣ್ಣನವರ ಮಡದಿಯರಾದ ಗಂಗಾಂಬಿಕೆ, ನೀಲಾಂಬಿಕೆಯರೊಂದಿಗೆ ದಾಸೋಹ ಮಾಡುವಲ್ಲಿ ನಾಗಲಾಂಬಿಕೆ ಕೈಜೋಡಿಸಿದ್ದಾಳೆ. ಬಸವಣ್ಣನವರ ಇಡೀ ಕುಟುಂಬ ಕಲ್ಯಾಣದ ಚಳುವಳಿಯಲ್ಲಿ ಭಾಗವಹಿಸಿತ್ತೆಂಬುದು ಇಲ್ಲಿ ಗಮನಿಸಬೇಕಾದ ಸಂಗತಿ. ಅನುಭವ ಮಂಟಪಕ್ಕೆ ಅಕ್ಕಮಹಾದೇವಿ ಆಗಮಿಸುವ ಸಂದರ್ಭ. ಅಲ್ಲಮ ಅನೇಕ ಶರಣರಿಗೆ ಮುಕ್ತಿಯ ಮಾರ್ಗವನ್ನರುಹಿ ಮಹಾಯಾತ್ರೆ ಕೈಗೊಂಡು ಮತ್ತೆ ಕಲ್ಯಾಣಕ್ಕೆ ಆಗಮಿಸಿ ಶೂನ್ಯಸಿಂಹಾಸನದಲ್ಲಿ ಆಸೀನನಾಗಿ ಬಸವಣ್ಣನವರಿಗಿದ್ದ ದಾಸೋಹ ಅಹಂಭಾವವನ್ನು ಆರೋಗಣೆಯ ನೆಪದಲ್ಲಿ ನೀಗಿಸುವ ಸಂದರ್ಭ. ಕಲ್ಯಾಣದಲ್ಲಿರುವ ಚಳುವಳಿ ಹಿಂಸಾಚಾರಕ್ಕೆ ತಿರುಗಿ ಬಸವಣ್ಣ ಕೂಡಲಸಂಗಮಕ್ಕೆ ಹೋಗಿ ಬಯಲಾದ ಸುದ್ದಿ ತಿಳಿದ ನಾಗಲಾಂಬಿಕೆ ಬಸವನಿಗಾಗಿ ಹಲುಬಿ ಹಂಬಲಿಸುವ ಸಂಗತಿಗಳು. ಶಿವಗಣ ಪ್ರಸಾದಿ ಮಹಾದೇವಯ್ಯನವರ ಶೂನ್ಯಸಂಪಾದನೆಯಲ್ಲಿ ನಿರೂಪಿತವಾಗಿದ್ದು; ನಾಗಲಾಂಬಿಕೆಯ ಕರ್ತೃತ್ವ ಶಕ್ತಿಯನ್ನು ತಿಳಿಯಲು ಸಹಾಯಕವಾಗಿದೆ.

ಇಷ್ಟೆಲ್ಲಾ ಗೋಜಲುಗಳ ನಡುವೆಯೂ ಸಿಕ್ಕಿರುವ ಆಕೆಯ ಕೆಲವೇ ವಚನಗಳು ಅವಳ ವ್ಯಕ್ತಿತ್ವ ತಿಳಿಯುವಲ್ಲಿ ಸಹಕಾರಿಯಾಗಿವೆ. ಎಮ್ಮಕ್ಕ ನಾಗಾಯಿಯ ವಚನ ಮೂರು ಕೋಟಿ ಮುನ್ನೂರು ಎಂದು ಸಿದ್ಧರಾಮ ಹೇಳಿದ್ದರೂ ದೊರೆತಿರುವ ವಚನಗಳು ಕೇವಲ ೧೫ ಮಾತ್ರ. ಕಲ್ಯಾಣದ ಚಳುವಳಿಯ ನಂತರ ನಾಗಲಾಂಬಿಕೆ ಅನೇಕ ಶರಣರನ್ನು ಕೂಡಿಕೊಂಡು ವಚನ ಸಂರಕ್ಷಣೆಗೆ ಮುಂದಾಗದಿದ್ದರೆ; ಕನ್ನಡ ಸಾಹಿತ್ಯಕ್ಕೆ ಮಾತ್ರವಲ್ಲ ಜಾಗತಿಕ ಸಾಹಿತ್ಯಕ್ಕೆ ಆಗುತ್ತಿದ್ದ ಅನ್ಯಾಯವನ್ನು ಊಹಿಸಿಕೊಳ್ಳಲೂ ಕಷ್ಟವಾಗುತ್ತದೆ. ನಾಗಲಾಂಬಿಕೆಯ ವಚನಗಳನ್ನು ಗಮನಿಸಿದಾಗ ಬಸವಣ್ಣನವರ ಬಗೆಗೆ ಅವಳಿಗಿದ್ದ ಅಪಾರ ಭಕ್ತಿ ತಿಳಿಯುತ್ತದೆ. ಸುಮಾರು ೧೦ ವಚನಗಳಲ್ಲಿ ಆಕೆ ಬಸವಣ್ಣನವರನ್ನು ಮನಸಾರೆ ಸ್ತುತಿಸಿದ್ದಾಳೆ.

*ಬಸವನೆ ಮುಖಸೆಜ್ಜೆ, ಬಸವನ ಅಮಳೋಕ್ಯ*
*ಬಸವನ ನಾನೆತ್ತಿ ಮುದ್ದಾಡಿಸುವೆನು*
*ಬಸವಾ, ಸಂಗನಬಸವದೇವಾ ಜಯತು*
*ಬಸವಾ, ಸಂಗಮ ಬಸವ ಲಿಂಗಾ ಜಯತು*
*ಬಸವಗೂ ಎನಗೂ ಭಾವಭೇದವಿಲ್ಲ;*
*ಬಸವಗೂ ಎನಗೂ ರಾಸಿಕೂಟವುಂಟು*
*ಬಸವಣ್ಣಪ್ರಿಯ ಚೆನ್ನಸಂಗಯ್ಯನಲ್ಲಿ*
*ಬಸವನ ಬೆಸಲಾದ ಬಾಣತಿ ನಾನಯ್ಯ*
*ಬಸವಾ, ಬಸವಾ, ಬಸವಾ!*
*ಬಸವನ ನಾನೆತ್ತಿ ಮುದ್ದಾಡುವೆನು, ಬಸವನ ಬೆಸಲಾದ*
*ಬಾಣತಿ ನಾನಯ್ಯ*

–ಈ ಮಾತುಗಳನ್ನು ಇಲ್ಲಿ ಮುಖ್ಯವಾಗಿ ಗಮನಿಸಬೇಕು. ಬಸವಂಗೂ ಎನಗೂ ಅಭೇದಭಾವ ಎನ್ನುವ ನಾಗಲಾಂಬಿಕೆಯ ಮಾತಿನಲ್ಲಿ ಬಸವಣ್ಣ ನಾಗಲಾಂಬಿಕೆಯ ಅಂತರಂಗದ ಜ್ಯೋತಿಯಾಗಿ ಕಂಗೊಳಿಸಿದ್ದಾನೆ.

ಅನುಭವ ಮಂಟಪದಲ್ಲಿ ಅಲ್ಲಮನನ್ನು ಕಂಡು ಹೃದಯಕಮಲದಲ್ಲಿ ನಿಜವು ನೆಲೆಗೊಂಡ ಬಳಿಕ, ಎನ್ನಂತ

ರಂಗ ಸಂದು ಸಂಶಯ ತೊಲಗಿತ್ತೆಂದು ಬಸವಣ್ಣಪ್ರಿಯ ಚೆನ್ನಸಂಗಯ್ಯನಲ್ಲಿ ಎನ್ನ ಪರಮಗುರು ಅಲ್ಲಮಪ್ರಭುದೇವರ ಶ್ರೀಚರಣವ ಕಂಡೆನಾಗಿ ಎಂದು ಅವಳು ಹೇಳುವಲ್ಲಿ ಅಲ್ಲಮರ ಬಗೆಗೆ ಅವಳಿಗಿದ್ದ ಅಪಾರ ಭಕ್ತಿಭಾವ ತಿಳಿಯ ಬಹುದಾಗಿದೆ. ನಾಗಲಾಂಬಿಕೆ ಹಾಯ್ದು ಬಂದದ್ದು ದುರ್ಗಮ ಹಾದಿಯನ್ನು ಯಾವುದೇ ಬಗೆಯ ಟೀಕೆ–ಟಿಪ್ಪಣಿಗಳಿಗೆ ಮನಸ್ಸು ಕೊಡದೆ ತಾನಿಡಿದ ಗುರಿಯನ್ನು ಪೂರೈಸುವಲ್ಲಿ ನಾಗಲಾಂಬಿಕೆ ಸಫಲಳಾದವಳು.

*ಮನದೊಡೆಯ ಮಹದೇವ ಮನವ ನೋಡಿಹನೆಂದು*
*ಮನುಜರ ಕೈಯಿಂದ ಒಂದೊಂದು ನುಡಿಸುವನು*
*ಇದಕ್ಕೆ ಕಳವಳಿಸದಿರುಮನವೆ, ಕಾತರಿಸದಿರುತನುವೆ*
*ನಿಜವ ಮರೆಯದಿರು ಕಂಡಾ, ನಿಶ್ಚಿಂತನಾಗಿರು ಮನವೆ*
*ಬಸವಣ್ಣಪ್ರಿಯ ಚೆನ್ನಸಂಗಯ್ಯನು*
*ಬೆಟ್ಟದನಿತಪರಾಧವನು ಒಂದು ಬೊಟ್ಟಿನಲ್ಲಿ ತೊಡೆವನು.*

ಭಗವಂತನಿಗೆ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಎಂಥ ಕಷ್ಟ ಬಂದರೂ ಭಗವಂತ ಕರವಿಡಿದೆತ್ತಿಕೊಳ್ಳುತ್ತಾನೆನ್ನುವ ನಂಬುಗೆ ಅವಳದು.

ಬಸವಣ್ಣ ಬಯಲಾದ ನಂತರ ನಾಗಲಾಂಬಿಕೆ ತನ್ನ ಜೀವನೋತ್ಸಾಹವನ್ನು ಬತ್ತಿಸಿಕೊಳ್ಳಲಿಲ್ಲ. ತನ್ನ ಮಗ ಚೆನ್ನಬಸವಣ್ಣ, ಗಂಗಾಂಬಿಕೆ ಮುಂತಾದ ಶರಣರೊಡನೆ ಕಲ್ಯಾಣವನ್ನು ತೊರೆಯಬೇಕಾದ ಅನಿವಾರ್ಯತೆಯಲ್ಲಿ ಅವಳು ಹೆದರಲಿಲ್ಲ. ಕಲ್ಯಾಣ ತೊರೆದು ಮುಂದುವರಿಯಲು ಬೆನ್ನಟ್ಟಿ ಬಂದ ಬಿಜ್ಜಳನನ್ನು ಹಿಮ್ಮೆಟ್ಟಿಸಿ ಉಳುವಿಯನ್ನು ಪ್ರವೇಶಿಸಿದಾಗ ಅಲ್ಲಿಗೂ ಶತ್ರುಸೈನ್ಯ ಹಿಂಬಾಲಿಸಲು ಅನೇಕ ಶರಣರು ಯುದ್ಧದಲ್ಲಿ ಹೋರಾಡಿ ಮಡಿಯುತ್ತಾರೆ. ಕೊನೆಗೆ ನಾಗಲಾಂಬಿಕೆ, ನುಲಿಯಚೆಂದಯ್ಯ ಶರಣ ಸಾಹಿತ್ಯ, ಶರಣ ಸಂಸ್ಕೃತಿ ಉಳಿಸುವಲ್ಲಿ ಪ್ರಶಸ್ತವಾದ ತುಂಗಭದ್ರಾ ನದಿಯ ತೀರಕ್ಕೆ ಬಂದು ತರೀಕೆರೆ ಹತ್ತಿರದ ಎಣ್ಣೆ ಹೊಳೆಯಲ್ಲಿ ನಾಗಲಾಂಬಿಕೆಯೂ ಅಲ್ಲಿಂದ ಸಮೀಪದ ನಂದಿಯಲ್ಲಿ ನುಲಿಯ ಚೆಂದಯ್ಯಗಳೂ ಬೀಡುಬಿಟ್ಟ ತಾವೂ ಕೈಗೊಂಡ ಮಹಾಕಾರ್ಯ ಸಫಲವಾದದಕ್ಕೆ ಸಂತೋಷಗೊಂಡು ತಾವು ಬೀಡುಬಿಟ್ಟ ಸ್ಥಳದಲ್ಲೇ ಬಯಲಾಗುತ್ತಾರೆ. ಅಕ್ಕನಾಗಮ್ಮನ ಗವಿ ಉಳವಿಯಲ್ಲಿರುವುದರಿಂದ ಉಳವಿಯಲ್ಲಿಯೇ ಅಕ್ಕ ನಾಗಮ್ಮ ಬಯಲಾದರೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಎಣ್ಣೆಹೊಳೆಯಲ್ಲಿರುವ ನಾಗಲಾಂಬಿಕೆಯ ಮತ್ತಿತರ ಶಿಲ್ಪಗಳು, ನಂದಿಯಲ್ಲಿರುವ ಚೆಂದಯ್ಯನವರ ಸಮಾಧಿ ಇರುವುದರಿಂದ ಎಣ್ಣೆಹೊಳೆಯೇ ನಾಗಲಾಂಬಿಕೆ ಬಯಲಾದ ಸ್ಥಳವೆಂದು ತಿಳಿಯಬಹುದಾಗಿದೆ. ನಾಗಲಾಂಬಿಕೆಯ ಘನವ್ಯಕ್ತಿತ್ವದ ಹಿರಿಮೆಯನ್ನು ಆಯ್ದಕ್ಕಿ ಮಾರಯ್ಯನ ಹೆಂಡತಿ ಲಕ್ಕಮ್ಮ, ಕೋಲಶಾಂತಯ್ಯ, ಮರುಳ ಶಂಕರದೇವ, ಚೆನ್ನಬಸವಣ್ಣನವರು ಮನಸಾರೆ ಕೊಂಡಾಡಿದ್ದಾರೆ. ಎಂದೂ ಆತ್ಮಪ್ರಶಂಸೆಗೆ ಮುಂದಾಗದ ನಾಗಲಾಂಬಿಕೆ ವಚನ ಸಾಹಿತ್ಯ ಉಳಿಸುವಲ್ಲಿ, ಬೆಳೆಸುವಲ್ಲಿ ಶ್ರಮಿಸಿದ್ದಾಳೆ.

ಬಸವಣ್ಣ ಬಯಲಾದ ಸುದ್ದಿ ತಿಳಿದು ಗೋಳಾಡಿದ ನಾಗಲಾಂಬಿಕೆ ಬಸವಣ್ಣನವರನ್ನು ನೆನೆದು

*ಭಕ್ತಿಯ ತವನಿಧಿಯೆ, ಮುಕ್ತಿಯ ಮೂರುತಿಯೆ*
*ಲಿಂಗಜಂಗಮದ ಚೈತನ್ಯವೆ*
*ನಿಮ್ಮನ್ನಗಲಿ ಎಂತು ಸೈರಿಸುವೆನು ?*
*ಎಲೆ ಅಯ್ಯಾ ಪರಮ ಗುರುವೆ*
*ಆಹಾ ಎನ್ನ ಅಂತರಂಗದ ಜ್ಯೋತಿಯೆ*
*ನಿಮ್ಮ ಒಕ್ಕಶೇಷ ಪ್ರಸಾದವನಿಕ್ಕಿ*
*ಎನ್ನ ಪಾವನವ ಮಾಡಿ ಉಳುಹಿದೆಯಯ್ಯಾ*
*ಲಿಂಗವೆ ಎನಗಿನ್ನಾರು ಹೇಳಯ್ಯ ನೀವಲ್ಲದೆ?*
*ಬಸವಣ್ಣಪ್ರಿಯ ಚೆನ್ನಸಂಗಯ್ಯ*
*ನೀವಗಲಿದೊಡೆ ಎನ್ನ ಪ್ರಾಣ ನಿಮ್ಮೊಳಗಲ್ಲದೆ*
*ಅಗಲಬಲ್ಲುದೆ?*

ಬಸವಣ್ಣ ನನ್ನನ್ನು ಬಿಟ್ಟು ಹೋಗಿರಬಹುದು. ಆದರೆ ನಾನವರನ್ನು ಬಿಟ್ಟು ಇರಲಾರೆ. ಬಸವಣ್ಣನವರನ್ನು ಬಿಡಲಾರದ ನಾಗಲಾಂಬಿಕೆ ಬಸವಭಕ್ತಿಯ ನಿಷ್ಠೆಯಲ್ಲಿ ಬಸವಜ್ಯೋತಿಯಲ್ಲಿ ಒಂದಾಗುತ್ತಾಳೆ, ಅಮರಳಾಗುತ್ತಾಳೆ. ❖

> ಕಲ್ಯಾಣವನ್ನು ಬಯಸುವ ಮನುಷ್ಯನು ಈ ಆರು ದುರ್ಗುಣಗಳನ್ನು ತ್ಯಜಿಸಬೇಕು. ಅವು ಯಾವುವೆಂದರೆ ಅತಿ ನಿದ್ರೆ, ಹೆದರಿಕೆ, ಸಿಟ್ಟು, ಆಲಸ್ಯ, ಎಚ್ಚರಿಗೇಡಿತನ, ಕೆಲಸವನ್ನು ಮುಂದೆ ಹಾಕುವುದು.
>
> –ಮಹಾಭಾರತ





# ಯುಗಧರ್ಮ

–ಡಾ|| ಸಿ.ಪಿ. ಕೃಷ್ಣಕುಮಾರ್ *

'ರಾಜಕೀಯ ಸ್ಥಾನದಲ್ಲಿ ಆಧ್ಯಾತ್ಮ ನೆಲೆಗೊಳ್ಳಬೇಕು' ಎಂಬುದು ಆಚಾರ್ಯ ವಿನೋಬಾ ಭಾವೆ ಅವರ ಒಂದು ಮಾತು. ಇದು ಇಂದಿನ ಯುಗಧರ್ಮವನ್ನೇ ಕನ್ನಡಿಸು ವಂಥಹುದು. ಅವರ ಆಶಯ ಸಂಪೂರ್ಣವಾಗಿ ಈಡೇರ ದಿದ್ದರೂ ದೇಶ–ಅಷ್ಟೇಕೆ, ಜಗತ್ತು ಆ ಹಾದಿಯಲ್ಲಿದೆ ಎನ್ನಲು ಅಡ್ಡಿಯಿಲ್ಲ.

ಎಲ್ಲೆಡೆಯೂ, ಎಲ್ಲ ರಂಗಗಳಲ್ಲಿಯೂ ರಾಜಕೀಯವೆ ಈ ಹೊತ್ತು ತಾಂಡವವಾಡುತ್ತಿರುವಾಗ, ಆಧ್ಯಾತ್ಮ ಹೇಗೆ ನೆಲೆಗೊಂಡೀತು, ಇಂಥ ಹಾರೈಕೆ ಭ್ರಮಾಜನ್ಯವಲ್ಲವೆ ಎಂಬ ಪ್ರಶ್ನೆ ಮೊದಲೇ ಹುಟ್ಟದಿರದು. ಮೇಲುನೋಟಕ್ಕೆ, ರಾಜಕೀಯವೇ ವಿಜೃಂಭಿಸುತ್ತಿರುವ ಚಿತ್ರ ಕಾಣುತ್ತದೆ, ದಿಟ, ಆದರೆ ಸೂಕ್ಷ್ಮವೂ ದೂರಗಾಮಿಯೂ ಆದ ದೃಷ್ಟಿಗೆ ಗೋಚರಿಸುತ್ತದೆ, ಅದರ ಹಿಂದೆ ಸುಪ್ತಾಸುಪ್ತವಾಗಿ ಕೆಲಸ ಮಾಡುತ್ತಿರುವ ಆಧ್ಯಾತ್ಮಿಕ ಶಕ್ತಿ. ಪೂರ್ಣಪ್ರಜ್ಞೆಗೆ ಅದು ಅಗ್ರಾಹ್ಯವಾಗಲಾರದು.

ಇಲ್ಲಿ ರಾಜಕೀಯ, ಆಧ್ಯಾತ್ಮ ಎಂಬ ನುಡಿಗಳ ಅರ್ಥವನ್ನು ವಿಶದಗೊಳಿಸಿಕೊಳ್ಳಬೇಕು. ರಾಜಕೀಯಕ್ಕೆ ಒಳ್ಳೆಯ ಅರ್ಥವೂ ಉಂಟು. (ಗಾಂಧಿಯೊಬ್ಬ ರಾಜಕೀಯ ವ್ಯಕ್ತಿಯೆ ಅಲ್ಲವೆ!) ಆದರೂ ಇಂದು ಅದು ಅಧಿಕಾರ ಲಾಲಸೆ, ಸ್ವಾರ್ಥ ಮುಂತಾದ ಅನಿಷ್ಟಗಳಿಗೆ ಸಂಕೇತವಾಗಿ ಪರಿಣಮಿಸಿದೆ. ಈ ಅರ್ಥದಲ್ಲಿ ರಾಜಕೀಯ ತೊಲಗಬೇಕಾಗಿದೆ. ಇನ್ನು, ಆಧ್ಯಾತ್ಮ, ಅದನ್ನು ನಾವು ಅದ್ವೈತ, ಬ್ರಹ್ಮಸಾಕ್ಷಾತ್ಕಾರ, ನಿರ್ವಿಕಲ್ಪ ಸಮಾಧಿ ಎಂಬ ಅತೀತಾರ್ಥಗಳಲ್ಲಿ ತೆಗೆದುಕೊಳ್ಳದೆ, ಲೌಕಿಕವಾದ ಅರ್ಥದಲ್ಲಿ ಪರಿಭಾವಿಸಬೇಕಾಗುತ್ತದೆ. ಮಾನವೀಯತೆ, ಸೌಹಾರ್ದ, ಸಮಷ್ಟಿ, ಹಿತದೃಷ್ಟಿ, ಇತರರೂ ನಮ್ಮಂತೆಯೇ ಎಂದು ತಿಳಿಯುವ ಔದಾರ್ಯ, ಸಮತ್ವದ ಭಾವನೆ(ಇದೂ ಅದ್ವೈತವೆ)–ಇವೆಲ್ಲ ಆಧ್ಯಾತ್ಮವಲ್ಲದೆ ಮತ್ತೇನು? ಜನಾರ್ದನನ ಬದಲು ಜನತೆ ನಮ್ಮ ಲಕ್ಷ್ಯವಾಗಬೇಕು, ಅಥವಾ ಜನತೆಯ ಸೇವೆಯ ಮೂಲಕವೆ ಜನಾರ್ದನನ ಸೇವೆ ಮಾಡಬೇಕು–ಇದು ಇಂದಿನ ಆದರ್ಶ. ಇದನ್ನೆಲ್ಲ 'ಸರ್ವೋದಯ' ಎಂಬ ಒಂದು ಮಾತಿನಲ್ಲಿ ಸಂಗ್ರಹಿಸಬಹುದು. ಪ್ರಜಾಪ್ರಭುತ್ವ, ಎಷ್ಟೇ ದುರುಪಯೋಗಗೊಂಡರೂ ಅಂತಿಮವಾಗಿ ಸರ್ವೋದಯದಲ್ಲಿ ಪರ್ಯವಸಾನಗೊಳ್ಳಲೇಬೇಕು.

ಸಮಾಜದ ದುರ್ಬಲ ವರ್ಗಗಳು ಇಂದು ಮುಂದೆ ಬರುತ್ತಿವೆ; ಅವುಗಳನ್ನು ಹಿಂದಿನಂತೆ ತುಳಿಯುವುದು ಸಾಧ್ಯವಿಲ್ಲ. ಆ ವರ್ಗಗಳಿಗೆ ಕಾನೂನಿನ ರಕ್ಷೆಯಿದೆ. ಉದಾಹರಣೆಗೆ, ಅಸ್ಪೃಶ್ಯತೆಯ ಸಾರ್ವಜನಿಕ ಆಚರಣೆ ಇಂದು ಅಶಕ್ಯ. ಆದ್ದರಿಂದ, ಬಹುಸಂಖ್ಯಾತ ಪ್ರಬಲ ವರ್ಗಗಳು ಅನಿವಾರ್ಯವಾಗಿ, ಒಂದು ವೇಳೆ ಮನಸ್ಸಿಲ್ಲದಿದ್ದರೂ, ಅಲ್ಪಸಂಖ್ಯಾತ ದುರ್ಬಲ ದಲಿತ ವರ್ಗಗಳ ಏಳಿಗೆಗೆ ಅವಕಾಶಮಾಡಿಕೊಡಬೇಕಾಗಿದೆ ಮಾತ್ರವಲ್ಲ, ನೆರವಾಗಬೇಕಾಗಿದೆ. ಇದು ಈ ಯುಗದ ಒತ್ತಡ. ಕವಿವಾಣಿ ಸಾರುವಂತೆ, 'ಇನ್ನಾಯಿತು ಓರೋರ್ವರ ಗರ್ವದ ಕಾಲ, ಇದು ಸರ್ವರ ಕಾಲ!' ಈ ಸಮಷ್ಟಿ ಪ್ರಜ್ಞೆಯಲ್ಲಿ ಆಧ್ಯಾತ್ಮಿಕ ಸ್ಫುರಣವಿದೆ. ಇಂದಲ್ಲ ನಾಳೆ ಕ್ಷುಲ್ಲಕ ರಾಜಕೀಯ ಹಿಂಜರಿದು, ಪ್ರಬುದ್ಧ ರಾಜಕಾರಣ ಬೇರೂರಿ, ಸರ್ವೋದಯ ಸಿದ್ಧಿಸದಿರದು. ಈ ಪರಿವರ್ತನೆಯ ಚಕ್ರವನ್ನು ತಡೆಯುವುದು ಯಾರಿಂದಲೂ ಸಾಧ್ಯವಿಲ್ಲ; ಬೇಕಾದರೆ, ಅದನ್ನು ತ್ವರಿತಗೊಳಿಸಬಹುದಷ್ಟೆ.

ಸದ್ಯಕ್ಕಂತೂ ರಾಜಕೀಯವೊಂದೆ ಸಾರ್ವಭೌಮ(ಅಪ) ಮೌಲ್ಯವಾಗಿ ಮೆರೆಯುವಂತೆ ತೋರುತ್ತಿದೆ. ಅದನ್ನು ಆದಷ್ಟು ಬೇಗ ಪದಚ್ಯುತಿಗೊಳಿಸಿ, ಅದರ ಸ್ಥಾನದಲ್ಲಿ, ಉನ್ನತ ಮೌಲ್ಯಗಳನ್ನು– ಅವು ಸಾಹಿತ್ಯಕವಾಗಬಹುದು, ಸಾಂಸ್ಕೃತಿಕವಾಗಬಹುದು, ಆಧ್ಯಾತ್ಮಿಕವಾಗಬಹುದು–ಪ್ರತಿಷ್ಠಾಪಿಸುವುದು ಪ್ರಜ್ಞಾವಂತರೆಲ್ಲರ ಕರ್ತವ್ಯವಾಗಿದೆ. ರಾಜಕೀಯ ಕನಿಷ್ಠವಾದದ್ದು, ಆಧ್ಯಾತ್ಮ ವರಿಷ್ಠವಾದದ್ದು. ಈ ತುದಿಯಿಂದ ಆ ತುದಿಗೆ ಏರುವುದು ಎಲ್ಲರ ಆದರ್ಶವಾಗಲಿ; ಪ್ರತಿಜ್ಞೆಯಾಗಲಿ. ಇದು ಯುಗವಾಣಿಯ ಕರೆ. ❖

* ನಂ. 2265/19, 6ನೇ ಕ್ರಾಸ್, 2ನೇ ಮೈನ್, ವಿನಾಯಕನಗರ, ಮೈಸೂರು –570 012.



## ಚಿಂತನೆ

# ಪರನಿಂದೆ ಬೇಡ – ಪರೋಪಕಾರಿಯಾಗಿ

–ನ್ಯಾಯಮೂರ್ತಿ ಡಾ. ಮ. ರಾಮಾ ಜೋಯೀಸ್ *

*ಪರಚ್ಛಿದ್ರೇಷು ಹೃದಯಂ ಪರವಾರ್ತಾನು ಚ ಶ್ರವಃ ।*
*ಪರಮರ್ಮಣಿ ವಾಚಂ ಚ ಖಲಾನಾಮಸೃಜದ್ವಿಧಿಃ ।*

ಇನ್ನೊಬ್ಬರ ದೋಷವನ್ನು ಹುಡುಕುವುದರಲ್ಲಿ ಮನಸ್ಸು, ಇನ್ನೊಬ್ಬರ ಸುದ್ದಿಯನ್ನು ಕೇಳುವುದರಲ್ಲಿ ಕಿವಿ, ಇನ್ನೊಬ್ಬರಿಗೆ ಮರ್ಮಭೇದಕವಾಗುವ ಮಾತನಾಡುವುದರಲ್ಲಿ ರುಚಿ– ಈ ಮೂರನ್ನು ದುರ್ಜನರಿಗಾಗಿ ಬ್ರಹ್ಮನು ಸೃಷ್ಟಿಸಿದ್ದಾನೆ. (ಕವಿವಿಡಂಬನ ೯೮).

ಅಂದರೆ, ಸಜ್ಜನವಾಗಿ ಬಾಳಬೇಕೆಂಬ ವ್ಯಕ್ತಿ ಇಂತಹ ಗುಣಗಳನ್ನು ಪ್ರಯತ್ನಪೂರ್ವಕವಾಗಿಬಿಡಬೇಕು.

ದುರ್ಜನರ ಸ್ವಭಾವವನ್ನು ಅರ್ಥಪೂರ್ಣವಾದ ರೀತಿಯಲ್ಲಿ ವರ್ಣಿಸಿರುವ ಶ್ಲೋಕ ಇದು. ಇಂದು ದುರದೃಷ್ಟವಶಾತ್, ರಾಜಕೀಯ ಕ್ಷೇತ್ರದಲ್ಲಿ ಇಂತಹ ಪ್ರವೃತ್ತಿ ಬಹಳವಾಗಿ ಕಂಡು ಬರುತ್ತಿದೆ. ನಿಜವಾಗಿ ಒಬ್ಬ ಒಳ್ಳೆಯ ವ್ಯಕ್ತಿಯಾಗಿ ಬಾಳಬೇಕಾದರೆ, ಇಂತಹ ಪ್ರವೃತ್ತಿಗಳಿಂದ ದೂರವಿರಬೇಕು.

**ಪರೋಪಕಾರಿಗಳಾಗಿ :**

*ಪರೋಪಕಾರಾಯ ಫಲಂತಿ ವೃಕ್ಷಾಃ*
*ಪರೋಪಕಾರಾಯ ವಹಂತಿ ನದ್ಯಃ ।*
*ಪರೋಪಕಾರಾಯ ದುಹಂತಿ ಗಾವಃ*
*ಪರೋಪಕಾರಾರ್ಥಮಿದಂ ಶರೀರಮ್ ॥*

ಪರೋಪಕಾರಕ್ಕಾಗಿ ಮರಗಳು ಹಣ್ಣು ಕೊಡುತ್ತವೆ. ಹೊಳೆಗಳು ಹರಿಯುತ್ತವೆ. ಹಸುಗಳು ಹಾಲನ್ನು ಕೊಡುತ್ತವೆ. ಈ ದೇಹವಿರುವುದು ಪರೋಪಕಾರಕ್ಕಾಗಿ (ಶ್ರುತೀವ್ಯಾಖ್ಯಾನೀತಿ) (೬೧)

ಪರೋಪಕಾರವೇ ಪುಣ್ಯದ ಕೆಲಸ. ಪರರಿಗೆ ತೊಂದರೆ ಕೊಡುವುದೇ ಪಾಪದ ಕೆಲಸ. ಆದುದರಿಂದ, ಪರೋಪಕಾರಿಯಾಗಿಯೇ ಬಾಳಿ ಎಂಬ ಸಂದೇಶ ಈ ಶ್ಲೋಕದಲ್ಲಿದೆ.

ಸ್ವಾಮಿ ವಿವೇಕಾನಂದರು ಈ ತತ್ವವನ್ನು ಬಹಳ ನಿಷ್ಠುರವಾಗಿ ಹೇಳಿದ್ದಾರೆ. 'ಯಾರು ಕೇವಲ ಸ್ವಾರ್ಥಕ್ಕಾಗಿ ಬದುಕುತ್ತಾರೋ ಅವರ ಜೀವನ ನಿರರ್ಥಕ. ಅಂತಹವರು ಬದುಕಿದ್ದರೂ ಸತ್ತಂತೆ. ಆದರೆ, ಇತರರಿಗಾಗಿ ಯಾರು ಬಾಳುತ್ತಾರೋ ಅಂತಹವರ ಜೀವನ ಸಾರ್ಥಕ. ಜನ ಸೇವೆಯೇ ಜನಾರ್ಧನ ಸೇವೆ' ಅದರಲ್ಲಿ ಜೀವನದ ಧನ್ಯತೆ ಇದೆ.

ಯಾವ ರೀತಿ ಸಸ್ಯ ಪ್ರಾಣಿಗಳು ಹಾಗೂ ನದಿಗಳು ಪರರಿಗೆ ಬದುಕಲು ವರವಾಗಿದೆಯೋ, ಅದೇ ರೀತಿ ಜೀವಿ ಗಳಲ್ಲಿ ಶ್ರೇಷ್ಠವಾದ ಮಾನವರು ಪರೋಪಕಾರಕ್ಕಾಗಿಯೇ ಬದುಕಬೇಕು. ಅಂತಹವರು ಮರಣಹೊಂದಿದ ನಂತರವೂ ಅಮರರಾಗುತ್ತಾರೆ. ಅಂದರೆ, ಅಂತಹವರನ್ನು ಮುಂದಿನ ಪೀಳಿಗೆಗಳು ಕೃತಜ್ಞತೆಯಿಂದ ಸ್ಮರಿಸುತ್ತಾರೆ. ಇಂತಹ ಲಕ್ಷಾಂತರ ಮಹಾಪುರುಷರ ಉದಾಹರಣೆ ನಮಗೆ ತಿಳಿದಿದೆ. ಅಪ್ರತಿಮ ದೇಶಭಕ್ತರು, ಮಹಾನ್ ಸಾಧುಸಂತರು, ವೇದಾಂತಿಗಳು, ದಾನಿಗಳು ಇಂತಹವರು ಅಸಂಖ್ಯ. ಅವರ ಸ್ಮರಣೆ, ಸದಾ ನಡೆಯುತ್ತಿರುತ್ತದೆ. ಅದೆಷ್ಟು ಜೀವನ ಚರಿತ್ರೆಗಳು, ಅಂತಹವರು ಸ್ಥಾಪಿಸಿದ ಸಾಮಾಜಿಕ ಸಂಸ್ಥೆಗಳು ಅವರು ಬರೆದಂತಹ ಅದೆಷ್ಟು ಪುಸ್ತಕಗಳು ಇವುಗಳು ನಮಗೆ ತಿಳಿದಿರುವ ವಿಷಯ. ಅಂದರೆ ಅಂತಹವರಿಂದ ಅದೆಷ್ಟು ಶಾಶ್ವತವಾದ ಉಪಕಾರ ಸಮಾಜಕ್ಕೆ, ರಾಷ್ಟ್ರಕ್ಕೆ ಆಗಿದೆಯೆಂಬುದನ್ನು ಅಳೆಯಲು ಸಾಧ್ಯವಿಲ್ಲ. ಅಂತಹವರ ಸಾಲಿಗೆ ಸೇರಿ, ನೀವೂ ಆದರ್ಶ ಜೀವನವನ್ನು ನಿಮ್ಮ ಶಕ್ತಿಗನುಗುಣವಾಗಿ ನಡೆಸಿ.

❖

ಕ್ಷಮಾಗುಣಕ್ಕೆ ಸರಿಯಾದ ತಪಸ್ಸಿಲ್ಲ. ಸಂತೋಷಕ್ಕೆ ಸರಿಯಾದ ತೃಪ್ತಿಯಿಲ್ಲ. ಆಸೆಯಂತಹ ಕಾಯಿಲೆ ಬೇರೊಂದಿಲ್ಲ. ದಯೆಯನ್ನು ಹೊರತುಪಡಿಸಿದ ಧರ್ಮವೇ ಇಲ್ಲ. ಹೀಗೆ ಮನುಷ್ಯನು ಕ್ಷಮಾಶೀಲನೂ, ಸಂತೃಪ್ತಜೀವಿಯೂ, ಅನಾಸಕ್ತನೂ, ದಯಾವಂತನೂ ಆದರೆ ಮಾತ್ರ ಆದರ್ಶಪ್ರಾಯನೆನಿಸುವ.

–ಸೂಕ್ತಿಮುಕ್ತಾವಳಿ

* ಮಾಜಿ ಮುಖ್ಯ ನ್ಯಾಯಾಧೀಶರು ಹಾಗೂ ಮಾಜಿ ರಾಜ್ಯಪಾಲರು, ಬೆಂಗಳೂರು.



## ವಿಚಾರ



# ದೇಶಿಯತನ ಅಸಡ್ಡೆಗೆ ಗುರಿಯಾಗಬಾರದಲ್ಲವೇ?

–ಸ.ರಾ. ಸುಳಕೂಡೆ *

೧೬ನೇ ಶತಮಾನದಿಂದ ಪರಕೀಯತೆಗೆ ಗುರಿಯಾಗಿ ಭಾರತೀಯರೆಲ್ಲರೂ ದೇಶಿತನಕ್ಕೆ ಅಗ್ರಸ್ಥಾನ ನೀಡುವ ಮನಸ್ಸನ್ನು ಬದಲಿಸಿಕೊಂಡಿರುವುದು ಸ್ಪಷ್ಟವಾಗಿ ನಿಂತಿದೆ. ದೇಶೀತನವು ಅಂದಿನಿಂದ ತಬ್ಬಲಿತನವನ್ನು ಅನುಭವಿಸುತ್ತಲೇ ಮುಂದುವರಿದಿದೆ. ದೇಶೀತನವನ್ನು ಹಿಂದುಳಿತನಕ್ಕೆ ಸಂಕೇತವೆಂದು ಪ್ರಸಾರಗೊಳಿಸುವುದು ಅವ್ಯಾಹಿತವಾಗಿ ನಡೆದೇ ಇದೆ. ಪರಂಪರಾಗತವಾಗಿ ಜನಾಂಗದಿಂದ ಜನಾಂಗಕ್ಕೆ ವರ್ಗಾಯಿಸಲ್ಪಟ್ಟ ಕೌಶಲ್ಯಗಳು, ಬೆಳೆಗಳ ತಳಿಗಳು, ಉಡಿಗೆ–ತಡಿಗೆಗಳು, ಆಹಾರ–ವಿಹಾರಗಳು, ಅಸಡ್ಡೆಗೆ ಒಳಗಾಗುವುದು ಸಂಸ್ಕೃತಿಯ ಸತ್ವವನ್ನು ಮರೆತು, ಮರೆಯುವುದೇ ಆಗುವುದಿಲ್ಲವೇ?

ನಮ್ಮ ದೇಶದ ದೇಶೀಯತನವು ನಿಸರ್ಗ ಮೂಲವಾಗಿರುವಂತೆ ಅಸಲುತನದಿಂದ ಪ್ರಾಯೋಗಿಕವೂ, ಸುಲಭ ಸಾಧ್ಯತೆಯಿಂದ ಸಿದ್ಧವಾಗುವ ಪ್ರಕ್ರಿಯೆಗಳನ್ನು ಒಳಗೊಂಡು ಜನಪದದ ಭಾಗವೇ ಆಗಿರುವುದು ಚೇತೋಹಾರಿ. ಗೋಮೂತ್ರದಲ್ಲಿ ಕ್ರಿಮಿನಾಶಕ ಗುಣವಿರುವ ಬಗ್ಗೆ, ಕ್ಯಾನ್ಸರ್ ನಂತಹ ಮಾರಕ ರೋಗಗಳಿಗೂ ಬೇಕಾದ ಪ್ರತಿರೋಧಕ ಶಕ್ತಿ ಇರುವ ಬಗ್ಗೆ ಇತ್ತೀಚೆಗಿನ ಸಂಶೋಧನೆಗಳು ದೃಢಪಡಿಸಿವೆ. ಇಂದು ಅಮೆರಿಕಾ ದೇಶ ಗೋಮೂತ್ರ ಔಷಧಿಯನ್ನು ಪೇಟೆಂಟ್ ಕೂಡಾ ಮಾಡಿಕೊಂಡಿದೆ. ಇಂಥ ಅನೇಕ ವಿಷಯಗಳಲ್ಲಿ ನಾವಿಂದು ಅವೈಜ್ಞರಾಗಿ ಸತತ ವರ್ತಿಸುತ್ತಿರುವುದು ಬದುಕನ್ನೇ ನಿರಾಕರಿಸದಂತಾಗಿಲ್ಲವೇ?

ಭಾರತೀಯರು ಅನಾದಿಕಾಲದಿಂದಲೂ ಸುಸಂಸ್ಕೃತರಾಗಿಯೇ ಬದುಕಿದವರೆಂಬ ಪ್ರತೀತಿಗೆ ಒಳಗಾದ ಸಂಗತಿ ಇತಿಹಾಸ ಪ್ರಸಿದ್ಧವಾಗಿದೆ. ಭಾರತೀಯರ ಉಡುಗೆ–ತೊಡುಗೆ, ಗ್ರಾಮಗಳ ನಿರ್ಮಾಣ, ನಗರಗಳ ವ್ಯವಸ್ಥೆ ಅತ್ಯಂತ ಸಮರ್ಪಕವಾಗಿತ್ತೆಂಬುದು ಹೆಮ್ಮೆಯ ಸಂಗತಿ. ಇತ್ತೀಚಿನ ದಿನಗಳಲ್ಲಿ ಭಾರತೀಯರಿಗೆ ಪರಕೀಯತೆಯಗೀಳು ಹೆಚ್ಚುತ್ತಲೇ ನಡೆದಿದೆ. ವಿದೇಶಿ ಪರಂಪರೆಯ ಎಲ್ಲ ಆಚಾರ ವಿಚಾರಗಳು ಮೋಹಕಗೊಂಡಿವೆ. ಜನ್ಮದಿನಗಳನ್ನಂತೂ ವಿದೇಶಿ ಪರಂಪರೆಯಲ್ಲಿ ಆಚರಿಸುತ್ತಿರುವುದು ಪ್ರತಿಷ್ಠೆಯಾಗಿ ನಿಂತಿದೆ. ಇದೆಲ್ಲ ಅನುಕರಣೀಯ ವಿಹಂಗಮ ನೋಟವಾಗಿದೆ. ಮನುಷ್ಯ ಪ್ರಾಣಿಜನ್ಯ ಸ್ಥಿತಿಯಿಂದಲೇ ಬಂದಿರುವುದು ಅರಿತ ಸಂಗತಿ. ೫೦೦೦ ವರ್ಷಗಳಿಂದ ನಾಗರಿಕರಂತೆ ಸಮಾಜ ಜೀವನದಲ್ಲಿ ತೊಡಗಿದ್ದು ಆ ಮೊದಲು ಅತಿ ಹೆಚ್ಚು ಕಡಿಮೆ ಪ್ರಾಣಿಗಳಂತೆ ಬೆತ್ತಲಾಗಿದ್ದು ಗೆಡ್ಡೆ ಗೆಣಸು ಹಸಿ ಮಾಂಸವನ್ನಷ್ಟೇ ಸೇವಿಸಿ ಗುಹೆಗಳಲ್ಲಿ ವಾಸಿಸುತ್ತಿದ್ದ ಎನ್ನುವ ಸಿದ್ಧಾಂತವನ್ನು ಒಪ್ಪಿಕೊಳ್ಳುವುದಾದರೆ ನಾವು ಜಗತ್ತಿನ ಚರಿತ್ರೆಯ ಕೆಲವೊಂದು ಮುಖ್ಯ ವಿಷಯಗಳಿಂದ ವಂಚಿತರಾಗಬೇಕಾಗುತ್ತದೆ. ಮಾನವ ಮೂಲತಃ ಸುಧಾರಣೆಯ ಮನೋಗತವನ್ನು ಹೊಂದಿದ್ದಾನೆ. ಕಾಲ–ಕಾಲಕ್ಕೆ ತನ್ನ ಅನುಭವದ ಆಳವನ್ನು ಹೆಚ್ಚಿಸಿಕೊಂಡಿರುವ ಮನುಷ್ಯರು ತನ್ನ ಇರುವಿಕೆಗೆ ತನ್ನ ಪರಿಸರದಿಂದಲೇ ಪ್ರಭಾವಿತನಾಗಿ ಹಿತಮಿತದೊಳಗೆ ಬದುಕುವುದನ್ನು ಕಲಿಯ ಬೇಕಾಗಿಲ್ಲವೇ?

ಖಗೋಲಶಾಸ್ತ್ರದಲ್ಲಿ ಬಹಳಷ್ಟು ಹಿಂದಿದ್ದ ಪಾಶ್ಚಾತ್ಯರಿಗೆ ಸಾವಿರಾರು ವರ್ಷಗಳ ಹಿಂದೆ ಕ್ಷಣ, ದಿನ, ವಾರ, ತಿಂಗಳು, ನಕ್ಷತ್ರ ರಾಶಿಗಳ ಜ್ಞಾನ ಲಭಿಸಿದ್ದು ಇವರ ನಾಗರಿಕತೆಗಳಿಂದ ಎನ್ನುವುದು ವಿದ್ವಾಂಸರುಗಳ ವಾದ. ಹಿಂದೆ ಈಜಿಪ್ಟ್, ಮೆಕ್ಸಿಕೋ, ಚೀನಾ, ಭಾರತದಂತಹ ದೇಶಗಳನ್ನು ಬಿಟ್ಟು ಉಳಿದ ದೇಶಗಳಲ್ಲಿ ಕಾಲಗಣನೆ ಅಷ್ಟು ಕ್ರಮಬದ್ಧವಾಗಿ ಇರಲಿಲ್ಲ. ಆಫ್ರಿಕಾದ ಕೆಲವು ಜನಾಂಗಗಳಲ್ಲಿ ಇವರಿಗೂ ವರ್ಷಾರಂಭವನ್ನು ಋತುವಿನ ಆಧಾರದಲ್ಲಿ ಗುರುತಿಸಲಾಗುತ್ತಿದೆ. ಭಾರತೀಯರು ಸಹ ಋತುವಿನ ಆಧಾರದಿಂದಲೇ ತಿಂಗಳುಗಳಲ್ಲಿ ಗುರುತಿಸಿಕೊಂಡಿದ್ದರು.

* ೧೩೧೯, ರಾಮತೀರ್ಥನಗರ, ಬೆಳಗಾವಿ –೫೯೮ ೦೧೬.

ಭಾರತೀಯರು ಸ್ಥಳೀಯರಾಗಿ ವ್ಯವಹರಿಸುವುದರಲ್ಲಿ ತಮ್ಮ ನಿಲುವುಗಳನ್ನು ಬದಲಿಸುತ್ತಲೇ ನಡೆದಿದ್ದಾರೆ. ಕಾಲ ಮಾನದ ಸ್ಥಿತಿ-ಗತಿ ಮತ್ತು ಪ್ರಯೋಗಶೀಲತೆಯು ಇಂದಿನ ಅಗತ್ಯವಾಗಿದ್ದರೂ ನಮ್ಮ ಮೂಲನೆಲೆಗಳನ್ನು ಹಾಳುಗೇಡು ವುವ ಮನೋಗತಗಳು ಸರ್ವಥಾ ಸಮರ್ಥನೀಯವಲ್ಲ.

ಭಾರತೀಯರ ಬದುಕಿನ ಕ್ರಮವು ಅನಂತ, ಅಗಮ್ಯ ಮತ್ತು ಸತ್ವಭರಿತವಾಗಿದ್ದು, ಮಾನವೀಯ ಸಂಬಂಧಗಳನ್ನು ನಿಭಾಯಿಸುವ ಕಳಕಳಿ ಹೊಂದಿದೆ. ಇತ್ತೀಚಿನ ಜನ ಸಂಖ್ಯೆಯ ವಿಪರೀತ ಒತ್ತಡಕ್ಕೆ ಒಳಗಾಗಿರುವ ಭಾರತವು ಕುಲಾಂತರ ತಳಿಗಳ ಪ್ರಲೋಭನೆಯೊಳಗೆ ಸಿಲುಕಿಕೊಂಡಿದೆ. ರಸಾಯನಿಕ ಬಳಕೆ ಕ್ರಿಮಿನಾಶಕ ಸಿಂಪರಣೆ ಮುಂತಾದ ವಿದೇಶಿತನಕ್ಕೆ ಮರುಳಾದ ಕೃಷಿ ವಿಸ್ತರಣೆ ಯೊಂದಿಗೆ ದೇಶಿತನದ ಕೃಷಿ ಮಾಯವಾಗುವ ಹಂತಕ್ಕೂ ತಲುಪಿದ್ದ ಪರಿಸ್ಥಿತಿ ಉದ್ಭವಿಸಿತ್ತು. ವಿಷಪೂರಿತ ಮತ್ತು ಕುಲಾಂತರ ತಳಿಯಿಂದ ಮುಕ್ತಿ ಹೊಂದಲು ಇಂದು ಸಾವಯವ ಕೃಷಿ ಮತ್ತೆ ಪ್ರಸಿದ್ಧಿ ಪಡೆದುಕೊಳ್ಳುತ್ತಿದೆ.

ನಮ್ಮ ಭಾಷೆಯ ಬಗ್ಗೆಯೂ ನಮಗೆ ಹೆಮ್ಮೆ ಇಲ್ಲ. ಇಂಗ್ಲೀಷ್ ಕಲಿಯುವುದು, ಮಾತಾಡುವುದು ಹೆಮ್ಮೆಯ ಪ್ರತಿಷ್ಠೆಯ ಹೆಗ್ಗುರುತೆಂದು ಅಹಂ ಬೆಳೆಸಿಕೊಂಡವರು ನಾವು. ಕನ್ನಡದ ಅಮ್ಮ, ಅಪ್ಪ ಎಂಬ ಶಬ್ದಗಳೂ ಅಸಡ್ಡೆಗೆ ಒಳಗಾಗಿ ನಿಲ್ಲುವಂತೆ ಮಾಡಿದವರು ಕನ್ನಡ ಭಾಷೆ ಬಳಕೆಗೆ ಇಲ್ಲಿ ಪ್ರೋತ್ಸಾಹಿಸಲಾಗುತ್ತಿದೆ. ಕನ್ನಡ ಅಭಿವೃದ್ಧಿ ಪ್ರಾಧಿಕಾರ ವನ್ನು ಸ್ಥಾಪಿಸಿಕೊಂಡ ಹಂತಕ್ಕೂ ತಲುಪಿದ್ದೇವೆ. ನಮ್ಮ ನೆಲ-ಜಲ ಭಾಷೆಯ ಬಗ್ಗೆ ಅಸಡ್ಡೆ ತೋರಿಸಿ ನಾವು ಎಷ್ಟೇ ಸುಧಾರಣೆ ಹೊಂದಿದವರೆಂದು ಹೇಳಿಕೊಂಡರೂ ನಮ್ಮ ಕೀಳರಿಮೆ ಕಡಿಮೆಯಾಗದು. ನಮ್ಮತನವನ್ನು ತೊರೆಯುವುದು ನಾಡನುಡಿ ಬಗ್ಗೆ ಅಸಡ್ಡೆ ತೋರು ವುದೆಲ್ಲವೂ ಸ್ವಾಭಿಮಾನ ಶೂನ್ಯದ ಪ್ರತೀಕವೆಂಬುದು ಇನ್ನಾದರೂ ಅರಿತು ದೇಶಿತನದ ಸೊಗಡನ್ನು ಬಿತ್ತರಿಸು ವುದು ಪ್ರಥಮ ಪ್ರಾಶಸ್ತ್ಯ ಸಿಗುವಂತಾಗಬೇಕಲ್ಲವೇ?.

❖

## ಬಸವ ವಚನಾಮೃತ

**ತಾಳಮಾನ ಸರಿಸವನರಿಯೆ**
**ಓಜೆ ಬಜಾವಣೆಯ ಲೆಕ್ಕವನರಿಯೆ**
**ಅಮೃತಗಣ-ದೇವಗಣವನರಿಯೆ**
**ಕೂಡಲಸಂಗಮದೇವ, ನಿನಗೆ ಕೇಡಿಲ್ಲವಾಗಿ**
**ನಾನು ಒಲಿದಂತೆ ಹಾಡುವೆ**

ಕೂಡಲಸಂಗಮದೇವರೇ, ನಿನ್ನ ಮಹಿಮೆ ನನ್ನನ್ನು ಉತ್ತೇಜನಗೊಳಿಸಿದೆ. ನಿನ್ನ ಆ ಮಹಿಮೆಯನ್ನು ಹಾಡಾಗಿ ಕಟ್ಟಿ ಹಾಡದಿರಲಾರೆ. ತಾಳಮಾನ ಸರಿಯಾಗಿ ತಿಳಿಯ ದಿದ್ದರೂ, ಓಜೆಬಜಾವಣೆಯ ಲೆಕ್ಕ ಗೊತ್ತಿಲ್ಲದಿದ್ದರೂ, ಅಮೃತಗಣವಾವುದು ದೇವಗಣವಾವುದೆಂದರಿಯದಿದ್ದರೂ ನಿನ್ನ ಮಹಿಮೆಯನ್ನು ಹಾಡಾಗಿ ಕಟ್ಟಿ ಹಾಡದಿರಲಾರೆ. ಸಾವಿನ ಭಯವಿರುವ ಸಾಮಾನ್ಯ ದೇವರಿಗೆ ಮತ್ತು ಮಾನವರಿಗೆ - ಓಜೆ ಬಜಾವಣೆಯ ಗಣದ ಲೆಕ್ಕ ಸರಿ ಯಾಗದೆ ಹಾಡುಗಟ್ಟಿ ಹಾಡಿದಾಗ-ಕೇಡಾಗುವ ಸಂಭವ ವುಂಟು, ಆದರೆ ಮೃತ್ಯುಂಜಯನಾದ ಎಲೆ ಶಿವನೆ, ನಿನಗೆ ಯಾವ ಭಯವೂ ಇಲ್ಲವಾಗಿ- ನಾನು ಬಲ್ಲಂತೆ ನಿನ್ನ ನಾಮ ಸಂಕೀರ್ತನವನ್ನು ಕಟ್ಟಿ ಹಾಕುವೆ.

ಅಥವಾ ನನಗೆ ತಾಳಮಾನ ಸರಿಸಮಾನವಾಗಿ ಗೊತ್ತಿಲ್ಲ. ಯಾವ ಓಜೆಗೆ ಯಾವ ಬಜಾವಣೆಯೆಂಬುದೂ ಗೊತ್ತಿಲ್ಲ. ಅಮೃತಗಣ ಯಾವುದೋ ದೇವಗಣ ಯಾವುದೋ ವಿಷಗಣ ಯಾವುದೋ ಒಂದೂ ಗೊತ್ತಿಲ್ಲ. ಏನೂ ಗೊತ್ತಿಲ್ಲವಾದರೂ ನಿನ್ನ ಮಹಿಮಾ ಸಂಕೀರ್ತನ ಯನ್ನು ಹಾಡದಿರಲಾರೆ. ಯಾವ ವಿಷಗಣ ನಿನಗೇನು ಮಾಡೀತು? ನೀನು ಮೃತ್ಯುಂಜಯ ಶಿವ ನಾಗಿರುವೆ ಯಾಗಿ, ನಾನು ನಿನ್ನನ್ನು ನಿರ್ಭಯವಾಗಿ ಮನದಣಿಯ ಹಾಡುವೆ. ನಿನ್ನನ್ನು ಕುರಿತು ಹಾಡುವುದೇ ನನ್ನ ಪಾಡಾಗಿ- ಅದೇ ನನ್ನ ಪ್ರಾಣವಾಗಿ ರಾಗಕ್ಕಿಂತ ಭಕ್ತಿಭಾವವೇ ಪ್ರಶಸ್ತವಾದುದಾಗಿ ಜೀವನಪರ್ಯಂತ ನಿನ್ನನ್ನು ನಾನು ಬಲ್ಲಂತೆ ಹಾಡುತ್ತಿರುವೆ.

-ಡಾ|| ಎಲ್. ಬಸವರಾಜು
ಮೈಸೂರು







## ಹೆಸರು

-ಈಶ್ವರ ಮಂಟೂರ *

*ದೇವಾ!*
*ಗಂಟೆ ಜಾಗಟೆ ನಿನಗಿತ್ತರೆ,*
*ಅದರ ಮೇಲೆ ಇತ್ತವರ ಬೇಕು ಹೆಸರು*
*ನೀ ಹರಿಸಿದ ನೀರಿಗೆ ಅಡಿಗಲ್ಲಿಟ್ಟರೆ*
*ಅದರ ಮೇಲೆ ಇಟ್ಟವರ ಹೆಸರು*
*ನೀ ಬೆಳೆದ ಧಾನ್ಯವ ದಾಸೋಹಕ್ಕೆ ತಂದರೆ*
*ಫಲಕದ ಮೇಲೆ ತಂದವರ ಹೆಸರು*
*ನೀ ನೀಡಿದ ಧನ ನಿನ್ನಾಲಯಕೆ ನೀಡಿದರೆ*
*ಪತ್ರಿಕೆಯ ಮೇಲೆ ಕೊಟ್ಟವರ ಹೆಸರು*
*ನೀನೇ ರಚಿಸಿದ ಸೃಷ್ಟಿಯ ಮೇಲೆ ಮೂಡಿಸಲಿಲ್ಲ ನಿನ್ನ*
*ಅಗೋಚರ ಹೆಸರು !*
*ಈ ನಾಮ ವರ್ಣರಹಿತ ದೇಹಕ್ಕೇಕೆ ಬೇಕು*
*ಅಳಿಯುವ ಹೆಸರು ?*
*ಪ್ರತಿಯುಸುರಿಗೆ ಹಸಿರಾಗಿರಲಿ ಹೇಮಕೂಟೇಶ ನಿನ್ನ*
*ಪರಮ*
*ಪ್ರೇಮದ ಹೆಸರು!*

ಈ ಜೀವನದಿ ದಾಟಲು ನಮಗೆ ನಾವೆ ಬೇಕು. ನಾವೆಯಲ್ಲಿ 'ನಾವು' ಇರಬೇಕು ವಿನಃ 'ನಾ' ಇರಬಾರದು. ಅದು ಎಂದಿಗೂ ಬರಬಾರದು. 'ನಾ' ತುಂಬಿದ ನಾವೆ, ನಾವು ಇಲ್ಲದಂತೆ ಮಾಡುತ್ತದೆ. ನಮ್ಮನ್ನು ನಾವು ಅಳೆದು ಕೊಳ್ಳುವಾಗ ನಾವು ಬಹಳಷ್ಟು ಕಳೆದುಕೊಳ್ಳಬೇಕಾಗುತ್ತದ್' ಎನ್ನುವುದು ಓರ್ವ ಅನುಭಾವಿಯ ಅಭಿಮತ. ನಮ್ಮ ವ್ಯಕ್ತಿತ್ವ ನಮ್ಮ ಸಾಧನೆಗಳ ಮೂಲಕ ಅಭಿವ್ಯಕ್ತವಾಗಬೇಕು. ನಮ್ಮ ಬಣ್ಣನೆ ನಮ್ಮಿಂದಲೇ ಬೇಡ. ಮನ್ನಣೆಯ ದಾಹ ನಮ್ಮ ಆತ್ಮವನ್ನೇ ತಿಂದೀತು.

ಮಾನವ ಮಹಾದೇವನಾಗಲು, ಜೀವ ಶಿವನಾಗಲು ಕನಕ, ಕಾಂಚನ, ಕೀರ್ತಿ ಕಾಮನೆಗಳಿಂದ ಬಹುದೂರ ನಿಲ್ಲಬೇಕು. ಈ 'ಕ, ಕಾ, ಕೀ' ಗಳಿಂದೆ ದೂರ ಸರಿದವ ಸರದಾರನಾಗಬಲ್ಲನು! ನಾವು ಮಾಡುವ ಭಕ್ತಿ ಪ್ರಾರ್ಥನೆಗಳು ವಿರಳ, ನಿರಾಡಂಬರ ಸ್ವಾರ್ಥರಹಿತವಾಗಿರಲಿ. 'ಎನಗಿಂತ ಕಿರಿಯರಿಲ್ಲ; ಶಿವಭಕ್ತರಿಗಿಂತ ಹಿರಿಯರಿಲ್ಲ' ಎನ್ನುವ ಅಣ್ಣನವರ ಮಾತಿನಲ್ಲಿ ವಿನಯ ಮಡುಗಟ್ಟಿದೆ. ಬಿಜ್ಜಳನ ಮಂತ್ರಿ ಪದವಿ-ಪಟ್ಟಗಳು ಅವರ ತಲೆಯೊಳಗೆ ಗೂಡು ಗಟ್ಟಲಿಲ್ಲ. ಅಂತೆಯೇ ಅವರು 'ಮಾಡುವಂತಿರಬೇಕು, ಮಾಡ ದಂತಿರಬೇಕು, ಮಾಡುವ ಮಾಟದೊಳಗೆ ತಾನಿಲ್ಲದಂತಿರ ಬೇಕು' ಎಂದು ಆಶಿಸಿದರು. 'ನಾ' ಎನ್ನುವುದನ್ನು ಮನದಲ್ಲಿ ಅಂಟಿಸಿಕೊಂಡ ಅಜ್ಞಾನಿಗಳಿಗೆ 'ಮಾಡಿದೆನೆನ್ನದಿರಾ ಲಿಂಗಕ್ಕೆ, ಮಾಡಿದೆನೆನ್ನದಿರಾ ಜಂಗಮಕ್ಕೆ' ಎಂದು ಕಿವಿಮಾತು ಹೇಳಿದರು.

ಈ ದೇಹ, ಪ್ರಾಣಗಳೆಲ್ಲವೂ ಪರಮಾತ್ಮನ ದಿವ್ಯ ಕೊಡುಗೆ. ಪ್ರಸಾದಗಳೆಂಬ ಭಾವ ಅಳವಟ್ಟಾಗ ಈ ಅಹಂ, ಮಮಕಾರಗಳು ನಮ್ಮಿಂದ ದೂರ ಸರಿಯುತ್ತವೆ. ಅಹಮಿಕೆಯ ಈ ಏಣಿ ಮುರಿದಾಗಲೇ ನಾವು ನಿಶ್ಚಿಂತರಾಗಿ ರಬಲ್ಲೆವು. ದೈಹಿಕವಾಗಿ, ಆರ್ಥಿಕವಾಗಿ ರಾಜಕೀಯವಾಗಿ ಬಲಾಢ್ಯರೆನಿಸಿಕೊಂಡವರು, ಕೀರ್ತಿಯ ಲಾಲಸೆಗೋ, ಮನ್ನಣೆಯ ದಾಹಕ್ಕೋ ಆಡಂಬರವಾಗಿ ಅನೇಕರ ಕಣ್ಣು ಗಳಿಗೆ ರಾರಾಜಿಸುವಂತೆ ಕೆಲಸ ಮಾಡುತ್ತಾರೆ. ಯಾವುದೇ ಕಾರ್ಯ ಪ್ರತಿಷ್ಠೆಗಾಗಿ ಜರುಗಬಾರದು. ಆಕಾಶದೆತ್ತರಕ್ಕೆ ಹಾರಿದ ಹದ್ದಿಗಿಂತ, ಹೂ ಸುತ್ತುವ ದುಂಬಿಯೇ ಮೇಲು; ಶಿಖರ, ಕಳಸಗಳಿಗಿಂತ ಶಿವಶರಣರ ಪಾದದಾವುಗೆಗಳ ಬದುಕೇ ಬಲುಮಾನ್ಯ.

ತೊಟ್ಟಿಲಲ್ಲಿ ಕಣ್ಣರಳಿಸಿ ಆಡುವ ಕಂದನನ್ನು ಹೇಗೆ ಕರೆದರೂ, ಕಣ್ತೆರೆದು ನೋಡಿ ನಗುತ್ತಿತ್ತು. ಅಂತಹ ಅಂದದ ಕಂದನಿಗೊಂದು ಹೆಸರಿಟ್ಟು, 'ಇವನೇ ನೀನು, ನೀನೇ ಇವನು' ಎಂದು ಕೂಗಿ ಬೆನ್ನಿಗೆ ಹೊಡೆಯಿಸಿಕೊಂಡು ಗುಗ್ಗರಿ ತಿಂದಾದ ದಿನದಿಂದ, ಮುಗ್ಧ ಮಗುವಿನ ಮನದಲ್ಲಿ 'ನಾನು ಇಂಥ ಹೆಸರಿನವ' 'ಈ ಹೆಸರು ನನ್ನದು' ಎಂಬ

* 'ಮೃತುಂಜಯಕೃಪ', ಜಯನಗರ, ಧಾರವಾಡ -೫೮೦ ೦೦೧.

ಅಭಿಮಾನದ ಬೀಜ ಮೊಳಕೆಯೊಡೆದು, ಕಾಲ ಸರಿದಂತೆ ತನ್ನ ಹೆಸರಿನ ಬಗ್ಗೆ ದುರಾಭಿಮಾನಕ್ಕೀಡಾಗುವುದು. ಕೂಸು ಹೆಸರಿನ ಕೆಸರಿನೊಳಗೆ ಇಳಿಯಿತು. ಅಂದಿನಿಂದ ಮಣ್ಣು ಗೂಡುವ ತನಕ ತನ್ನ ಹೆಸರಿಗಾಗಿ ವ್ಯರ್ಥವಾದ ಹೋರಾಟ ನಡೆಸಿತು. ಸ್ಥಾವರ ಸಂಸ್ಕೃತಿಗೆ ಕಟ್ಟುಬಿದ್ದ ನಾವು ಹರಕೆ. ಪೂಜೆ ದಾನದ ಹೆಸರಿನಲ್ಲಿ ಗಂಟೆ, ಜಾಗಟೆ ಗುಡಿಗೆ ಕೊಟ್ಟು ಕಿರಿದಾದ ಗಂಟೆ ಜಾಗಟೆಗಳ ಮೇಲೆ ನಮ್ಮ ಉದ್ದನೆಯ ಹೆಸರು ಮೂಡಿಸುವಂತೆ ಕಲಹ ಮಾಡಿದೆವು. ಹೆಸರಿಗಾಗಿ ಉಸಿರು ಕಳೆದುಕೊಂಡವರು ಅನೇಕರು. ಆದರೆ ಭೂಮಿಯ ಉದ್ದಗಲಕ್ಕೂ ಹರಿದು ಭೂದೇವಿಯನ್ನು ಹಸಿರಾಗಿಸುವ ನದಿ ಎಲ್ಲಿಯೂ ನಿಲ್ಲಲಾರದು. ಯಾವುದನ್ನು ತನ್ನದು ಎನ್ನದು. ಯಾರಿಂದಲೂ ಒಂದಿಷ್ಟು ಘನತೆ ಗೌರವಗಳಿಗಾಗಿ ಆಶಿಸದು. ಅದಕ್ಕೆ ಸದಾವಕಾಲ ಹರಿಯುವುದರಲ್ಲಿಯೇ ಪರಮತೃಪ್ತಿ. ಬಿತ್ತಿದ ಬೀಜವೊಂದರಿಂದಲೇ ಬೊಗಸೆ ಬೊಗಸೆ ಕಾಳು. ಹಸಿದವನ ಹೊಟ್ಟೆಗೆ ಹಿಟ್ಟಾಗಿ, ರಟ್ಟೆಗೆ ಶಕ್ತಿಯಾಗಿ, ಕಣ್ಣುಗಳಿಗೆ ತೇಜವಾಗಬೇಕೆಂಬುದೇ ಕಾಳಿನ ಗುರಿ. ಚಂಚಲತ್ವದ ಪ್ರತೀಕವೇ ಹಣ. ಇತಿಹಾಸದ ಪುಟಗಳಲ್ಲಿ ಹಣಕ್ಕಾಗಿ ಹರಣ ಕಳೆದುಕೊಂಡವರ, ಹೆಣವಾದವರ ಕತೆಗಳು ಅನೇಕ. ಕಾಂಚಾಣಕ್ಕೆ 'ಕುರುಡು ಕಾಂಚಾಣ' ಎಂದು ಕರೆದರು ಮಾತಿನ ಮೋಡಿಗಾರ ಕವಿ ದ.ರಾ. ಬೇಂದ್ರೆಯವರು. ಹಣ ಸಂಪಾದಿಸುವುದು ಗುಡ್ಡೆ ಹಾಕುವುದಕ್ಕಲ್ಲ. ವೃದ್ಧಾಶ್ರಮ, ಅನಾಥಾಶ್ರಮಗಳಂತಹ ಸಮಾಜೋಪಯೋಗಿ ಕೆಲಸಗಳಿಗಾಗಿ ನೀಡಿ ಸಂಭ್ರಮಿಸುವುದಕ್ಕಾಗಿ, 'ಕೆರೆಯ ನೀರನ್ನು ಕೆರೆಗೆ ಚೆಲ್ಲಿರಿ' ಎಂಬ ದಾಸವಾಣಿಯಂತೆ 'ಶಿವನ ಸೊಮ್ಮನ್ನು ಶಿವನಿಗೆ ಅರ್ಪಿಸಿ ಬಿಡುವುದು. ಅರ್ಚನೆ, ಅರ್ಪಣೆ, ಅನುಭಾವಗಳ ಸಂಗಮವೇ ಆಧ್ಯಾತ್ಮ ಈ ಗಟ್ಟಿ ತಳಹದಿಯ ಮೇಲೆ ನಿಂತು ಸೇವಾತತ್ಪರರಾದವರ ಲೀಲಾ ಕ್ಷೇತ್ರ ಈ ಪವಿತ್ರ ನೆಲ.

ಜಗದೊಡೆಯ ತನ್ನ ಆನಂದ ವಿನೋದಕ್ಕಾಗಿ ರಚಿಸಿದ ಈ ಸೃಷ್ಟಿಯ ಮೇಲೆ, ಎಲ್ಲಿಯೂ ತನ್ನ ಪರಮ ಪ್ರೇಮದ ಹೆಸರನ್ನು ಬರೆಯಲಿಲ್ಲ. ಅವನೇ ಈ ಪ್ರಕೃತಿ ಬಿಂಬವಾದಾತನು. 'ಜಗದಗಲ, ಮುಗಿಲಗಲ, ಮಿಗೆಯಗಲ ನಿಮ್ಮಗಲವೇ' ಅವನ ಗಾತ್ರ, ಪಾತ್ರ, ಪ್ರಕೃತಿಯ ಮಕ್ಕಳಾದ ನಮಗೇಕೆ ಹೆಸರು ಗಳಿಸುವ ಹುಚ್ಚುತನ? ಕಾಣುವ ದೇಹವೇ ಒಂದು ದಿನ ಮರೆಯಾಗುವಾಗ, ಕಾಣದ ಹೆಸರು ಮರೆಯಾಗದೆ ಇರುವುದೇ? ಹಿರಿಯ ಹೆಸರಿಗಾಗಿ ಉಸಿರಿಡದೆ, 'ನಾನತ್ವ' ಕೆಳಗಿಟ್ಟು ಕಿಂಕರನಾಗಿ ಶಂಕರನ ಕಾಣು. ಗೋವಿನ ಕೆಚ್ಚಲು ಕೆಳಗೆ ಕುಳಿತಾಗ ಅಮೃತ ಸಮನ ಹಾಲು ಸಿಕ್ಕೀತು! ವೈಚಾರಿಕತೆಯ ಜೊತೆ ನಮ್ಮ ಆಚಾರ ವಿಚಾರಗಳು ಸರಿಯಿದ್ದಾಗ ಮಾತ್ರ ನಮ್ಮದೂ, ಸಂತರ, ಶಿವಶರಣರ, ದಾರ್ಶನಿಕರ, ತತ್ತ್ವಜ್ಞಾನಿಗಳ ಸುಗಮದ ದಾರಿಯಾಗಬಹುದು.

ಬನ್ನಿ ಬಂಧುಗಳೇ! ಆ ದಿಸೆಯತ್ತ ಹೆಜ್ಜೆ ಹಾಕೋಣ. ಮನ್ನಣೆಯ ಬಯಕೆಯನ್ನು ಮಣ್ಣು ಮಾಡೋಣ. ಮಹಾತ್ಮರ ಹೆಜ್ಜೆಗೆ ಹೆಜ್ಜೆ ಹಾಕೋಣ. ಅಹಂಕಾರ ಅಳಿಸೋಣ. ಸಾಧನೆ ಉಳಿಸೋಣ, ಅಮೃತಾತ್ಮರಾಗೋಣ.

❖

### ಶ್ರೀವಾಣಿ

ದೊಡ್ಡವನಾಗಲಿ, ಚಿಕ್ಕವನಾಗಲಿ, ಆಳಾಗಲಿ, ಅರಸನಾಗಲಿ, ಬಡವನಾಗಲಿ, ಶ್ರೀಮಂತನಾಗಲಿ ತಾನು ಮಾಡುವ ಕರ್ತವ್ಯವನ್ನು ಶ್ರದ್ಧೆಯಿಂದ ನಿಷ್ಠೆಯಿಂದ ಮಾಡಬೇಕು. ವಿದ್ಯಾರ್ಥಿ ವಿದ್ಯಾರ್ಥಿಯ ಲಕ್ಷಣವನ್ನು ಚೆನ್ನಾಗಿ ಅಳವಡಿಸಿಕೊಂಡು ತನ್ನ ಕರ್ತವ್ಯವನ್ನು ಚೆನ್ನಾಗಿ ಮಾಡಿದರೆ ಅದು ನಿಜಕ್ಕೂ ದೊಡ್ಡ ರಾಷ್ಟ್ರಸೇವೆ. ಅಂದ ಮೇಲೆ ರಾಷ್ಟ್ರ ಕಟ್ಟಬೇಕಾದರೆ ಈ ಜವಾಬ್ದಾರಿಯ ಪ್ರಜ್ಞೆ ಮೂಡಿದಾಗ; ಎಲ್ಲರೂ ಆ ಬಗ್ಗೆ ಚಿಂತನೆ ಮಾಡುವ ತಿಳುವಳಿಕೆ ಬಂದಾಗ ಮಾತ್ರ ದೇಶ ಉದ್ಧಾರ ವಾಗುತ್ತದೆ. ದೊಡ್ಡವರ ಒಂದು ಮಾತು ಹೀಗಿದೆ –'Each Man is great in his own place'. 'ಪ್ರತಿಯೊಬ್ಬನೂ ಅವನ ಸ್ಥಾನದಲ್ಲಿ ದೊಡ್ಡವನೇ' ಅದಕ್ಕಾಗಿ ಪ್ರತಿಯೊಬ್ಬ ವ್ಯಕ್ತಿ ತನ್ನ ಸ್ಥಾನದಲ್ಲಿ ತಾನು ಮಾಡಬೇಕಾಗಿದ್ದ ಕರ್ತವ್ಯವನ್ನು, ಚೆನ್ನಾಗಿ ಮಾಡುವುದೇ ನಿಜವಾದ ರಾಷ್ಟ್ರಸೇವೆ. ಕುಟುಂಬದಲ್ಲಿರುವ ಪ್ರತಿ ಯೊಬ್ಬರು ಚೆನ್ನಾಗಿರಬೇಕೆಂಬ ದೃಷ್ಟಿಯಿಂದ ಕೆಲಸ ಮಾಡಿದರೆ ಆಗ ಸಮೃದ್ಧಿಯಾದ ಒಂದು ಕುಟುಂಬ ವಾಗುತ್ತದೆ. ಆ ಕುಟುಂಬ ರಾಷ್ಟ್ರದ ಒಂದು ಅಂಗ ಎಂಬುದನ್ನು ಮರೆಯಬಾರದು. ಬರೀ ಮಾತಿನಿಂದ ರಾಷ್ಟ್ರದ ಉದ್ಧಾರವಾಗುವುದಿಲ್ಲ.





## ಶರಣೆ ಲಿಂಗಮ್ಮ

–ಶ್ರೀಮತಿ ಶಾಂತಾ ಜೈನಕೇರಿ *

ಪ್ರಾಚೀನ ಗಾರ್ಗಿ, ಮೈತ್ರೇಯಿ ಮುಂತಾದ ಸ್ತ್ರೀಪರ ಕಾಳಜಿಯ ಆಧ್ಯಾತ್ಮಿಕ ಜಿಜ್ಞಾಸುಗಳು ಕಂಡುಬರುತ್ತಾರೆ. ೧೨ನೇ ಶತಮಾನದಲ್ಲಿ ಭಗವಾನ್ ಬಸವೇಶ್ವರರ ಸಮಾಜೋ ಧಾರ್ಮಿಕ ಚಳುವಳಿಯ ಅಂಗವಾಗಿ ಆಧ್ಯಾತ್ಮಿಕ ಕ್ಷೇತ್ರವನ್ನು ಬೆಳಗಿದ ಸುಮಾರು ೩೩ ಶರಣೆಯರು ಕಂಡುಬರುತ್ತಾರೆ. ಇವರಲ್ಲಿ ಬಸವಣ್ಣನವರ ಆತ್ಮೀಯ ಒಡನಾಡಿ ಹಡಪದ ಅಪ್ಪಣ್ಣನವರ ಪತ್ನಿ ಲಿಂಗಮ್ಮ ಶರಣೆಯ ೧೧೪ ವಚನಗಳು ಪ್ರಕಟವಾಗಿವೆ. ಈಕೆಯ ವಚನಗಳ ಅಂಕಿತ 'ಅಪ್ಪಣ್ಣ ಪ್ರಿಯ ಚನ್ನಬಸವಣ್ಣ' ಲಿಂಗಮ್ಮನ ವಚನಗಳಲ್ಲಿ ಪ್ರಧಾನವಾಗಿ ಲಿಂಗತತ್ವದ ಬೋಧನೆಯನ್ನು ಕಾಣಬಹುದು. ಈಕೆ ಕೆಲವು ಬೆಡಗಿನ ವಚನಗಳನ್ನು ಮಂತ್ರಗೋಪ್ಯ ಮತ್ತು ನಿರ್ಮಳ ಕಾಯ ಎಂಬ ಸ್ವರವಚನ ರಚಿಸಿದ್ದಾಳೆ. ಆಧ್ಯಾತ್ಮ ಜೀವಿ ಹಡಪದ ಅಪ್ಪಣ್ಣನಿಗೆ ತಕ್ಕ ಪತ್ನಿ ಶರಣೆ ಲಿಂಗಮ್ಮ. ಆಕೆಯ ಜೀವನ ವೃತ್ತಾಂತಗಳು ಅಷ್ಟಾಗಿ ತಿಳಿದುಬಂದಿಲ್ಲ. ಆದರೆ ಆಕೆಯ ವಚನಗಳಿಂದ ಅವಳ ಉಜ್ವಲ ವ್ಯಕ್ತಿತ್ವವನ್ನು ಅರಿಯಬಹುದು ಎನ್ನುತ್ತಾರೆ ವಿದ್ವಾಂಸರಾದ ಡಾ॥ ಎಂ.ಎಂ. ಕಲಬುರ್ಗಿ ಅವರು.

ಭಗವಾನ್ ಜಗಜ್ಯೋತಿ ಬಸವೇಶ್ವರರ ಆಪ್ತ ಕಾರ್ಯ ದರ್ಶಿಯಾಗಿದ್ದ ಹಡಪದ ಅಪ್ಪಣ್ಣನ ಪತ್ನಿ ಲಿಂಗಮ್ಮನ ಉಲ್ಲೇಖ 'ಚಾರುಗುರುಭಕ್ತಿ ಲಿಂಗಮ್ಮ'. ಗುರುರಾಜ ಚರಿತ್ರೆಯಲ್ಲಿ ಕಂಡುಬರುತ್ತದೆ. ಲಿಂಗಮ್ಮನ ಗುರು 'ಚನ್ನಮಲ್ಲೇಶ' ಎಂದು ಆಕೆಯ ಸ್ವರಚಿತ ವಚನಗಳಿಂದ ಮೂರ್ತಿಗೊಂಡೆನು' ಎಂದು. ಆಕೆಯ ಸುಮಾರು ೧೩ ವಚನಗಳಲ್ಲಿ ತನ್ನ ಗುರುವನ್ನು ಸ್ಮರಿಸಿ ತನ್ನ ಗುರುಭಕ್ತಿಯನ್ನು ತೋರಿದ್ದಾಳೆ. ಕೆಳವರ್ಗದಲ್ಲಿ ಹುಟ್ಟಿ ಬಂದ ಲಿಂಗಮ್ಮ ತನ್ನ ಕುಲದ ಸೂತಕವನ್ನು ಕಳೆದುಕೊಂಡು ಶರಣಳಾದ ಸಂಗತಿಗಳನ್ನು ಮುಚ್ಚು ಮರೆಯಿಲ್ಲದೆ ಪ್ರಾಮಾಣಿಕವಾಗಿ ತನ್ನ ವಚನಗಳಲ್ಲಿ ಹೇಳಿದ್ದಾಳೆ. 'ಕನಿಷ್ಟದಲ್ಲಿ ಹುಟ್ಟಿದೆ, ಉತ್ತಮರಲ್ಲಿ ಬೆಳೆದೆ, ಸತ್ಯಶರಣರ ಪಾದವಿಡಿದೆ, ಆ ಶರಣರ ಕಂಗಳ ಮುಂದಣ ಕತ್ತಲೆ ಹರಿಯಿತ್ತು. ಕಂಗಳ ಮುಂದಣ ಕತ್ತಲೆ ಹರಿಯಲೊಡನೆ ಮಂಗಳದ ಮಹಾ ಬೆಳಗಿನೊಳ ಗೋಲಾಡಿ ಸುಖಿಯಾದೆನಯ್ಯಾ' ಎಂದಿದ್ದಾಳೆ. ಮನದ ಚಂಚಲತೆಯನ್ನು ನೀಗಿ ಘನವಸ್ತುವನ್ನು ಕಾಣಲು ಅದನ್ನು ನಿಗ್ರಹಿಸಬೇಕಾದ ವಿಧಾನವನ್ನು ಲಿಂಗಮ್ಮನ ಕೆಳಗಿನ ವಚನ ಚೆಲ್ಲಿ ಕಾಣಬಹುದು.

**'ಮನವ ನಿರ್ಮಲವ ಮಾಡೆನೆಂದು ತನುವ ಕರಗಿಸಿ, ಮನ ಬಳಲಿಸಿ, ಕಣ್ಣು ಕಾಣದ ಅಂಧಕರಂತೆ ಮುಂದು ಗಾಣದೆ, ಸಂದೇಹದಲ್ಲಿ ಮುಳುಗಿರುವ ಮನುಜರಿರಾ, ನೀವು ಕೇಳಿರೊ, ಹೇಳಿಹೆನು. ಮನವ ನಿರ್ಮಲವ ಮಾಡಿ ಆ ಘನವ ಕಾಂಬುದಕ್ಕೆ, ಆ ಮನವೆಂತಾಗಬೇಕೆಂದಡೆ– ಗಾಳಿಬೀಸದ ಜಲದಂತೆ, ಮೋಡವಿಲ್ಲದ ಸೂರ್ಯನಂತೆ, ಬೆಳಗಿದ ದರ್ಪಣದಂತೆ, ಮನ ನಿರ್ಮಲವಾದುದಲ್ಲದೆ ಆ ಮಹಾಘನವ ಕಾಣಬಾರದೆಂದರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣ'.** ಸರಳವಾದ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಗಹನವಾದ ಜೀವನ ತತ್ತ್ವಗಳನ್ನು ಬೋಧಿಸುವ ಲಿಂಗಮ್ಮ, ತೋರಿಕೆಯ ಭಕ್ತಿಯ ಡಾಂಭಿಕರನ್ನು ಜರಿಯುತ್ತಾಳೆ. **'ತನುನಷ್ಟವಾದಡೇನಯ್ಯಾ, ಮನ ನಷ್ಟವಾಗದನ್ನಕ್ಕ? ವಾಕ್ಕು ನಷ್ಟವಾದಡೇನಯ್ಯಾ ಬೇಕು ಬೇಡೆಂಬುದಳಿಯದನ್ನಕ್ಕ? ಅಂಗಸುಖ ನಷ್ಟವಾದಡೇನಯ್ಯಾ ಕಂಗಳ ಪಟಲ ಹರಿಯದನ್ನಕ್ಕ? ಮನ ಮುಗ್ಧವಾದಡೇನಯ್ಯಾ ಅಹಂ ಎಂಬುದ ಬಿಡದನ್ನಕ್ಕ? ಇವೆರೆಲ್ಲದೊಳಗಿದ್ದು 'ವಲ್ಲಭ' ನೆನಿಸಿಕೊಂಬವರ ನುಡಿಯ ಬಲ್ಲರು ನಮ್ಮ ಅಪ್ಪಣ್ಣ ಪ್ರಿಯ ಚನ್ನಬಸವಣ್ಣ'** ಎನ್ನುವ ಮೂಲಕ ಎಚ್ಚರಿಸಿದ್ದಾಳೆ. ಶರಣರ ನುಡಿಬೋಧೆ, ಆಚಾರ ನಿಷ್ಠೆ ಶರಣರನರಿಯದ ಭವಿಗಳ ಕುರಿತು ಲಿಂಗಮ್ಮ ತನ್ನ ವಚನಗಳಲ್ಲಿ ಕೆಳಗಿನಂತೆ ಅಭಿವ್ಯಕ್ತಿಸಿದ್ದಾಳೆ.

ಬ್ರಹ್ಮಾಂಡದಲ್ಲಿ ಹುಟ್ಟಿದವರೆಲ್ಲ ಭವಭಂದನಕ್ಕೊಳಗಾದರಯ್ಯ, ನಿಮ್ಮ ನಂಬಿದ ಸದ್ಭಕ್ತ ಮಹೇಶ್ವರರು ಭವ

* ನಂ. 87, 'ಶಾಂತಲಾ', ಕುವೆಂಪು ರಸ್ತೆ, ಶಿವಮೊಗ್ಗ–577 201.

ಬಂಧನವನೆ ಹಿಂಗಿ, ಮರಣಭಯವಗೆದು, ಕರಣಂಗಳ ಸುಟ್ಟು ಹರಿಮನವನಿಲಿಸಿ, ಅನಲ ಪವನ ಗುಣವರಿತು, ಜನನ ಮರಣ ವಿರಹಿತವಾದ ಶರಣರ ಭವಭಾರಿಗಳೆತ್ತ ಬಲ್ಲರು ಅಪ್ಪಣ್ಣಪ್ರಿಯ ಚೆನ್ನಬಸವಣ್ಣ? ಎನ್ನುವ ಮೂಲಕ ಇಹಲೋಕದ ಲೌಖಿಕರನ್ನು ವಿಡಂಬಿಸಿದ್ದಾಳೆ. **'ಆಸೆಯ ನಳಿದು ರೋಷವ ನಿಲಿಸಿ, ಜಗದ ಪಾಶವ ಹರಿದು ಈಶ್ವರ ನೆನಿಸಿಕೊಂಬ ಶರಣರ ಜಗದ ಹೇಸಿಗಳೆತ್ತ ಬಲ್ಲರು ಅಪ್ಪಣ್ಣ ಪ್ರಿಯ ಚನ್ನಬಸವಣ್ಣಾ?'** ಎಂದು ಪ್ರಶ್ನಿಸುತ್ತಾಳೆ.

ಲಿಂಗಮ್ಮನ ಗುರು–ಲಿಂಗ–ಜಂಗಮ ಭಕ್ತಿಯನ್ನು ಅಭಿವ್ಯಕ್ತಿ ಸುವ ವಚನವೊಂದು ಹೀಗಿವೆ. **'ಪೃಥ್ವಿಯನೆ ಆದಿಯ ಮಾಡಿ, ಅಪ್ಪುವಿನಲ್ಲಿ ಗೋಡೆಯ ನಿಕ್ಕಿ ಅಗ್ನಿಯನೆ ಅಪ್ಪುವಿನೊಳಗೆ ಹುದುಗಿಸಿ, ಆಸ್ತಿಯನೆ ಗಳುವ ಮಾಡಿ, ವಾಯುವನೆ ಬೀರಿ ಆಕಾಶವನೆ ಹೊದಿಸಿ, ಸಹಸ್ರದಳ ಕಮಲವನೆ ಮೇಲುಕಟ್ಟೆ ಕಟ್ಟಿ, ಬಯಲ ಮಂಟಪವ ಶೃಂಗಾರ ಮಾಡಿ, ಒಡೆಯನ ಬರವ ಹಾರೈಸುವ ಅವಸ್ಥೆಯನೆ ಕಂಡು, ಹಡಪದಪ್ಪಣ್ಣನೆ ಕರ್ಪೂರ ಸಿಂಹಾಸನ ವಾಗಿ ನಿಂದರು. ಅದಕ್ಕೆ ಚನ್ನಮಲ್ಲೇಶ್ವರನೆ ಜ್ಯೋತಿರ್ಮಯ ಲಿಂಗವಾಗಿ ಬಂದು ಬೆಲೆಗೊಂಡರು. ಜ್ಯೋತಿರ್ಮಯ ಲಿಂಗವು ಕರ್ಪೂರವು ಏಕವಾಗಿ ಪ್ರಜ್ವಲಿಸಿ, ಪರಮಪ್ರಕಾಶ ವಾಯಿತ್ತು. ಈ ಬೆಳಗಿನಲ್ಲಿ ನಾ ನಿಜಮುಕ್ತಳಾದೆನಯ್ಯಾ ಚನ್ನಮಲ್ಲೇಶ್ವರ ಅಪ್ಪಣ್ಣ ಪ್ರಿಯ ಚೆನ್ನಬಸವಣ್ಣಾ.** ತನ್ನ ಪತಿ ಹಡಪದ ಅಪ್ಪಣ್ಣ ಮತ್ತು ಗುರುಚನ್ನಮಲ್ಲೇಶ್ವರರನ್ನು ಸ್ಮರಿಸುತ್ತಾ ತಾನು ನಿಜ ಮುಕ್ತಳಾದ ಪರಿಯನ್ನು ತಿಳಿಸಿದ್ದಾಳೆ.

ಸಮಕಾಲೀನ ಶರಣರನ್ನು ಸ್ಮರಿಸಿ ಅವರಿಗೆ ಕೃತಜ್ಞತೆಯನ್ನು ಅರ್ಪಿಸಿರುವ ಲಿಂಗಮ್ಮನ ಮತ್ತೊಂದು ವಚನ ಹೀಗಿದೆ **'ಬಸವಣ್ಣ, ಚನ್ನಬಸವಣ್ಣ, ಮಡಿವಾಳಯ್ಯ, ಅಲ್ಲಮ ಪ್ರಭು, ಚನ್ನಮಲ್ಲೇಶ್ವರ, ಹಡಪದಪ್ಪಣ್ಣ, ತಮ್ಮೆಲ್ಲರ ತೊತ್ತಿನ–ತೊತ್ತಿನ ಪಡಿದೊತ್ತಿನ ಮಗಳೆಂದು ಹೊತ್ತು ಹೊತ್ತಿಗೆ ಎಚ್ಚರವ ಪಾಲಿಸಿ, ರಕ್ಷಣೆಯ ಮಾಡಿದ ಕಾರಣದಿಂದ ತಮ್ಮೆಲ್ಲರ ಶ್ರೀಪಾದ ದಲ್ಲಿಯೇ ನಿಜಮುಕ್ತಳಾದೆನಯ್ಯಾ ಅಪ್ಪಣ್ಣ ಪ್ರಿಯ ಚೆನ್ನಬಸವಣ್ಣಾ** ಎನ್ನುವ ಮೂಲಕ ತನ್ನ ವಿನೀತ ಭಾವವನ್ನು ಅಭಿವ್ಯಕ್ತಿಸಿದ್ದಾಳೆ. ತತ್ವಬೋಧನೆಯೆ ಪ್ರಧಾನವಾದ ಲಿಂಗಮ್ಮನ ವಚನಗಳು ಸಾಮಾನ್ಯ ಸ್ತ್ರೀಯೊಬ್ಬಳು ಸಾಧನೆಯಿಂದ ಏರಿದ ಉನ್ನತ ಹಂತವನ್ನು, ಆಧ್ಯಾತ್ಮ ಸಿದ್ಧಿಯನ್ನು ತಿಳಿಸುತ್ತವೆ. ಲಿಂಗಮ್ಮನ ಬಹುಪಾಲು ವಚನಗಳಲ್ಲಿ ರೂಪಕಗಳು, ಸಾಮತಿಗಳು, ಗಾದೆ ಮಾತುಗಳು ಕಂಡುಬರುತ್ತವೆ. **'ಆಸೆರೋಷ ಪಾಶ ಕ್ಕೊಳಗಾದ ಹೇಸಿಗಳು', ಸತ್ತು ಹುಟ್ಟಿ, ಹೂಣಿಸಿಕೊಂಬ' 'ನಿದ್ದೆಯ ಕೆಡಿಸಿ ಬುದ್ಧಿಯ ಕಲಿತಿಹೆನೆಂಬ ಬುದ್ಧಿಹೀನರು', 'ಅಂತರಂಗ ಬಹಿರಂಗ ಶುದ್ಧಿಯಿಲ್ಲದೆ ನುಡಿವ ಸಂತೆಯ ಸೂಳೆಯರು'** ಮುಂತಾಗಿ ಬಳಸಿದ್ದಾಳೆ. ವಚನಗಳಲ್ಲಿ ಕಂಡು ಬರುವ ನಿರಾಳಲಿಂಗ, ಬಚ್ಚಬರಿಯ ಬೆಳಗು, ಬಟ್ಟ ಬಯಲು, ಮಹಾಬೆಳಗು, ಮರವೆ, ಬಯಲದೇಹ ಮುಂತಾದ ಪದಗಳು ಲಿಂಗಮ್ಮನ ಶರಣ ತತ್ವ ಪರಿಭಾಷೆಯ ಔನ್ನತ್ಯವನ್ನು ಬಿಂಬಿಸುತ್ತವೆ.

ಲಿಂಗಮ್ಮನ ವಚನಗಳಲ್ಲಿ ಕಾವ್ಯಗುಣ ಕಡಿಮೆ ಆದರೂ ಆಕೆ ಬಳಸಿರುವ ಕೆಲವು ಉಪಮೆಗಳು, ಉಕ್ತಿಗಳು, ದೇಶೀ ಪದಗಳು, ಸಂಭಾಷಣಾ ರೂಪದ ಶೈಲಿಯಲ್ಲಿ ಆಕೆಯ ಸಮಕಾಲೀನ ಶರಣರ ಪ್ರಭಾವವಿರುವುದನ್ನು ಕಾಣಬಹುದು. ಲಿಂಗಮ್ಮನ ವಚನಗಳು ತತ್ವನಿರೂಪಣೆಯಲ್ಲಿ ಬೆಡಗಿನಿಂದ ಕೂಡಿದ್ದರೂ, ಟೀಕಿಸುವಲ್ಲಿ ಸರಳವಾಗಿ ದೇಶೀ ಸೊಗಡಿನಿಂದ ಕೂಡಿ ಆಪ್ತವೆನಿಸುತ್ತವೆ. ಲಿಂಗಮ್ಮನ ಸಾಧನೆ ಸಿದ್ಧಿ ವ್ಯಕ್ತಿವೈಶಿಷ್ಟ್ಯಗಳು ಆಕೆಯ ವಚನಗಳಲ್ಲಿ ಹರಳುಗಟ್ಟಿವೆ. ಮನುಕುಲಕ್ಕೆ ಮಾರ್ಗದರ್ಶಿಯಾಗಿವೆ. ಅಚ್ಚಗನ್ನಡ ಭಾಷೆಯಿಂದ ಓದುಗರನ್ನು ಆಕರ್ಷಿಸುತ್ತವೆ. ❖

### ಶ್ರೀವಾಣಿ

ಧರ್ಮವನ್ನು ಆಚರಣೆಯಲ್ಲಿ ತನ್ನಿರಿ. ಧರ್ಮಜೀವಿಗಳಾಗಿ ಉದ್ಧಾರ ಮಾಡಿಕೊಳ್ಳಿ ಎಂಬುದು ಎಷ್ಟು ಒಳ್ಳೆಯ ಮಾತು ಎಂಬುದನ್ನು ಗಮನಿಸಬೇಕು. ಧರ್ಮವೆನ್ನುವುದು ಸಕಲ ಮಾನವರ ಕಲ್ಯಾಣವನ್ನು ಕೋರುವ ಮಹಾತತ್ತ್ವ. ಇದು ಅರ್ಥವಾಗದ ವಿಷಯವಲ್ಲ. ವಿದ್ವಾಂಸರ ಆಸ್ತಿಯಲ್ಲ. ಸ್ವಾಮಿಗಳ ಆಸ್ತಿಯಲ್ಲ. ಮುಖಂಡರ ಆಸ್ತಿಯಲ್ಲ. ಧರ್ಮ ಶ್ರೀಸಾಮಾನ್ಯನ ಆಸ್ತಿ. ಧರ್ಮದ ಸಂದೇಶವೆಂದರೆ, ಪರಮಾತ್ಮನನ್ನು ನಂಬು. ಜಗತ್ತೆಲ್ಲವೂ ಮಹಾಶಕ್ತಿಯಿಂದ ವ್ಯಾಪಕವಾಗಿದೆ. ಊಹಾತೀತವಾಗಿರುವ ಶಕ್ತಿಯಿದು. ಅಖಂಡವಾದ ತೇಜಸ್ಸು ಅದು. ಅದರ ಮುಂದೆ ಅಣುಬಾಂಬ್ ತೃಣಪ್ರಾಯವಾದದ್ದು.







## ಕೋಶ ಓದಿ ನೋಡು

–ಎಚ್.ಎಸ್. ಸಿದ್ಧಗಂಗಪ್ಪ *

**'ಕೋಶ** ಓದಿ ನೋಡು, ದೇಶ ತಿರುಗಿ ನೋಡು' ಎಂಬುದು ಜನಪ್ರಿಯ ಗಾದೆ. ಕೋಶ ಓದುವುದರಿಂದ ಪುಸ್ತಕಜ್ಞಾನ, ದೇಶ ತಿರುವುದರಿಂದ ಪ್ರತ್ಯಕ್ಷ ಜ್ಞಾನ. ಪುಸ್ತಕದಿಂದ ಜ್ಞಾನದ ಅರಿವಾದರೆ, ಪ್ರತ್ಯಕ್ಷ ಜ್ಞಾನದಿಂದ ಅನುಭವ ನಮ್ಮದಾಗುತ್ತದೆ. ಇವೆರಡೂ ಬದುಕಿಗೆ ಅಗತ್ಯವೇ. ಇವು ಒಂದಕ್ಕೊಂದು ಪೂರಕ. ಪ್ರವಾಸ ಒಂದು ರೀತಿಯಲ್ಲಿ ಶಿಕ್ಷಣ ವಿದ್ದಂತೆ. ಕಲೆ, ಸಂಸ್ಕೃತಿಯ ಅರಿವಾಗಬೇಕಾದರೆ, ಮಾನವೀಯ ಮೌಲ್ಯಗಳನ್ನು ಮೈಗೂಡಿಸಿಕೊಳ್ಳಬೇಕಾದರೆ ಪ್ರವಾಸ ಮಾಡಬೇಕು. ಪ್ರವಾಸದಿಂದ ನಮ್ಮ ದೃಷ್ಟಿ ವಿಶಾಲವಾಗುತ್ತದೆ, ಜ್ಞಾನ ಹೆಚ್ಚಾಗುತ್ತದೆ, ಅನುಭವವಾಗುತ್ತದೆ. ಪ್ರವಾಸಕ್ಕೆ ಮಾಡಿದ ವೆಚ್ಚ ನಮ್ಮ ಬದುಕಿಗೆ ಹೂಡಿದ ಬಂಡವಾಳ!

ಆದರೆ ಎಲ್ಲರಿಗೂ ಪ್ರವಾಸ ಮಾಡುವ ಅವಕಾಶ ಒದಗುವುದಿಲ್ಲ. ಆ ಭಾಗ್ಯ ಕೆಲವರಿಗಷ್ಟೇ ದೊರೆಯುತ್ತದೆ. ಆರ್ಥಿಕ ಮುಗ್ಗಟ್ಟು, ಬಿಡುವಿಲ್ಲದ ಕೆಲಸ, ಅನಾರೋಗ್ಯ ಮೊದಲಾದ ಕಾರಣಗಳಿಂದ ಕೆಲವರಿಗೆ ಮಾತ್ರ ಪ್ರವಾಸ ಮಾಡಲು ಸಾಧ್ಯವಾಗುತ್ತದೆ. ಪ್ರವಾಸ ಮಾಡಲು ಸಾಧ್ಯವಾಗದವರು ಗ್ರಂಥಗಳ ಮೊರೆಹೋದರೆ ಪ್ರವಾಸದಿಂದ ಪಡೆಯುವ ಅನುಭವ ಸಂಪತ್ತನ್ನು ತಮ್ಮದಾಗಿಸಿಕೊಳ್ಳಬಹುದು. ನಾಲ್ಕುಗೋಡೆಗಳ ಮಧ್ಯೆ ಕುಳಿತು ಪುಸ್ತಕಗಳನ್ನು ಓದುವುದರಿಂದ ವಿಶ್ವದ ವಿವಿಧ ಭಾಗಗಳಲ್ಲಿರುವ ಜನರ ಜನಜೀವನ, ಆಚಾರ ವಿಚಾರ, ವೇಷಭೂಷಣ, ಆಹಾರ, ಇತಿಹಾಸ, ಸಾಂಸ್ಕೃತಿಕ ಪರಂಪರೆಯ ಪರಿಚಯವಾಗುತ್ತದೆ.

ನಾವು ದಿನನಿತ್ಯದ ಬದುಕಿನಲ್ಲಿ ಎಷ್ಟೋ ಸಮಯವನ್ನು ವ್ಯರ್ಥವಾಗಿ ಕಳೆಯುತ್ತೇವೆ. ಹಾಗೆ ವ್ಯರ್ಥವಾಗಿ ಕಳೆಯುವ ಕಾಲದಲ್ಲಿ ಸ್ವಲ್ಪಭಾಗವನ್ನಾದರೂ ಓದುವುದಕ್ಕಾಗಿ ವಿನಿಯೋಗಿಸಿದರೆ ಜ್ಞಾನವೃದ್ಧಿಯಾಗುತ್ತದೆ. ಹಣದ ಸಂಪತ್ತಿಗಿಂತಲೂ ಜ್ಞಾನಸಂಪತ್ತು ಹೆಚ್ಚು ಪ್ರಯೋಜನಕಾರಿ. ಅಷ್ಟೇ ಸುಭದ್ರ, ಒಂದು ರೀತಿಯಲ್ಲಿ ಫಿಕ್ಸೆಡ್ ಡಿಪಾಸೆಟ್ ಇದ್ದಂತೆ.

ಚಿಕ್ಕಮಕ್ಕಳಿಂದಲೇ ಓದುವ ಅಭಿರುಚಿಯನ್ನು ಬೆಳೆಸಿಕೊಳ್ಳಂತಹ ವಾತಾವರಣವನ್ನು ಮೂಡಿಸಬೇಕು. ಈ ನಿಟ್ಟಿನಲ್ಲಿ ಜಪಾನಿನಲ್ಲಿರುವ ವಿಧಾನವನ್ನೂ ಅನುಸರಿಸಬಹುದು. ಅಲ್ಲಿ ಪ್ರತಿಮಗುವು ಮನೆಯಲ್ಲಿ ತಾಯಿಯೆದುರು ತನಗೆ ಇಷ್ಟವಾದ ಪುಸ್ತಕವನ್ನು ಪ್ರತಿದಿನವೂ ಕನಿಷ್ಠ ಅರ್ಧಗಂಟೆ ಗಟ್ಟಿಯಾಗಿ ಓದಲೇಬೇಕು ಎಂಬ ನಿಯಮವನ್ನು ಜಾರಿಗೆ ತಂದಿದ್ದಾರಂತೆ. ಇದರಿಂದ ಕಡ್ಡಾಯವಾಗಿ ತಾಯಿಗೂ ಶಿಕ್ಷಣ ದೊರೆತು, ತಾಯಿ ಮಕ್ಕಳಿಬ್ಬರು ವಾಚಾನಾಭಿರುಚಿ ಬೆಳೆಸಿ ಕೊಳ್ಳಲು ಸಹಕಾರಿಯಾಗುತ್ತದೆ.

ಕ್ರಿಕೆಟ್ ಮ್ಯಾಚ್ ನಡೆಯುವಾಗ ತಮ್ಮ ಎಲ್ಲಾ ಕೆಲಸ ಕಾರ್ಯಗಳನ್ನು ಬದಿಗಿರಿಸಿ ಕ್ರಿಕೆಟ್ ಕಾಮೆಂಟ್ರಿ ಕೇಳುವಂತೆ, ವಾರಕ್ಕೊಂದಾದರೂ ಸಿನಿಮಾ ನೋಡಬೇಕೆನ್ನುವಂತೆ, ತಿಂಗಳಿ ಗೊಂದಾದರೂ ಒಂದು ಉತ್ತಮ ಪುಸ್ತಕವನ್ನು ಓದುವ ಕಾರ್ಯಕ್ರಮ ಹಾಕಿಕೊಂಡರೆ ವ್ಯಕ್ತಿಯ ಮಾನಸಿಕ ಹಾಗೂ ಬೌದ್ಧಿಕ ವಿಕಾಸಕ್ಕೂ ಅವಕಾಶವಾಗುತ್ತದೆ. ಒಂದು ಉತ್ತಮ ಕೃತಿ ಜೀವನ ಸಂಗಾತಿ ಇದ್ದಂತೆ. ನಾವು ಪುಸ್ತಕಕ್ಕೆ ಮಾಡುವ ವೆಚ್ಚ, ವಿನಿಯೋಗಿಸುವ ಸಮಯ ನಮ್ಮ ಭವಿಷ್ಯಕ್ಕೆ ಬುನಾದಿ. ಯಾರಿಂದಲೂ ಕದಿಯಲಾಗದ ಅಮೂಲ್ಯ ಜ್ಞಾನ ಸಂಪತ್ತನ್ನು ನೀಡುವ ಓದುವ ಹವ್ಯಾಸವನ್ನು ಜೀವನದಲ್ಲಿ ತಪಸ್ಸಿನಂತೆ ಅಳವಡಿಸಿಕೊಳ್ಳಬೇಕು. ❖

ವಿದ್ಯೆ ಮತ್ತು ಅರಸೊತ್ತಿಗೆಗಳು ಒಂದಕ್ಕೊಂದು ಸರಿದೊರೆಯಾಗಲಾರವು. ಅರಸನಿಗೆ ತನ್ನ ದೇಶದಲ್ಲಿ ಮಾತ್ರ ಗೌರವ ಇಲ್ಲವೆ ಮನ್ನಣೆ ; ಆದರೆ ವಿದ್ಯಾವಂತನಿಗೆ ಎಲ್ಲೆಡೆಯೂ ಮರ್ಯಾದೆ

–ಸುಭಾಷಿತ

* 53/1, 'ಶಿವಕೃಪ', ಮೊದಲನೇ ಮುಖ್ಯರಸ್ತೆ, ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು.

## ಹಣ್ಣುಗಳೂ ಕವಚದ ಬೀಜಗಳೂ (ನಟ್ಸ್)

-ವಾಮನರಾವ್ ಹೊದಿಕೆ *

ಹಣ್ಣುಗಳು ಮನುಷ್ಯನ ಸ್ವಾಭಾವಿಕ ಆಹಾರ. ಪರಿಪಕ್ವ ಆಹಾರ ಮತ್ತು ಪರಿಪೂರ್ಣ ಆಹಾರ. ಸೂರ್ಯನಿಂದಲೇ ಅದು ಪರಿಪಕ್ವವಾಗಿದ್ದು ತಿಂದೊಡನೆಯೇ ರಕ್ತಗತವಾಗುತ್ತದೆ. ಅದನ್ನು ಜೀರ್ಣಿಸಲು ಹೊಟ್ಟೆಯು ಪರಿಶ್ರಮ ಪಡೆಬೇಕಾಗುವುದೇ ಇಲ್ಲ. ಹಣ್ಣು ತಿನ್ನುವುದರಿಂದ ಮಲಸಂಗ್ರಹ ವಾಗುವುದೇ ಇಲ್ಲ. ಕೂಡಿಬಿದ್ದ ಮಲವೂ ಸಹ ಸಡಿಲಾಗಿ ಹೊರಬಿದ್ದು ಹೋಗುತ್ತದೆ.

ಆದರೆ ಹಣ್ಣು, ಮರದ ಮೇಲೆಯೇ ಪಕ್ವವಾದದ್ದಿರ ಬೇಕು. ಮರದಿಂದ ತೆಗೆದಿಟ್ಟು ಹಣ್ಣು ಮಾಡಿದವು ಅಷ್ಟೊಂದು ರುಚಿಕರವೂ ಇರುವುದಿಲ್ಲ. ಅವುಗಳಲ್ಲಿಯ ಸತ್ವಾಂಶವೆಲ್ಲ ಕೆಲಮಟ್ಟಿಗೆ ನಷ್ಟವಾಗದೇ ಉಳಿಯುವುದೂ ಇಲ್ಲ.

ಹಣ್ಣಿನ ಗಿಡ ಬೆಳೆಸಲಿಕ್ಕೆ ಹೆಚ್ಚಿನ ಶ್ರಮ ಹತ್ತುವುದಿಲ್ಲ. ಪಶು ಶಕ್ತಿಯಂತೂ ಬೇಕಾಗುವುದೇ ಇಲ್ಲ. ಒಮ್ಮೆ ಬೆಳೆಸಿದ ಗಿಡ ಮುಂದೆ ಹಲವು ವರ್ಷ ಬೆಳೆ ಕೊಡುತ್ತಲೇ ಹೋಗು ತ್ತದೆ. ವರ್ಷ ವರ್ಷಕ್ಕೆ ಅದರ ಉತ್ಪತ್ತಿ ಹೆಚ್ಚುತ್ತದೆ. ಇಷ್ಟೊಂದು ಸ್ವಲ್ಪಸ್ಥಳದಲ್ಲಿ, ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಇಷ್ಟೊಂದು ದೀರ್ಘಕಾಲ ಬೆಳೆ ಕೊಡುವ ಬೇರೆ ಯಾವುದೇ ವನಸ್ಪತಿ ಇಲ್ಲ. ಹಣ್ಣಿನ ಗಿಡಗಳೆಲ್ಲ ಕಲ್ಪವೃಕ್ಷಗಳೇ ಆಗಿವೆ.

ಹಣ್ಣುಗಳನ್ನು ಚಿಕ್ಕಮಕ್ಕಳು, ಅಶಕ್ತರು, ರೋಗಿಗಳು, ಮುದುಕರು, ಆದಿಯಾಗಿ ಸಕಲರೂ ಸದಾಕಾಲದಲ್ಲಿಯೂ ತಿಂದು ಜೀರ್ಣಿಸಿಕೊಳ್ಳಬಹುದು. ಫಲಾಹಾರಿಗಳಿಗೆ ರೋಗ ಗಳ ಭಯವಿಲ್ಲ. ಆದ್ದರಿಂದಲೇ ಫಲಾಹಾರವು ಪರಮ ಪವಿತ್ರವಾದ ಶ್ರೇಷ್ಠ ಆಹಾರವಾಗಿರುತ್ತದೆ.

ಆರೋಗ್ಯದೃಷ್ಟಿಯಿಂದಲೂ, ರುಚಿಯ ದೃಷ್ಟಿ ಯಿಂದಲೂ, ಸೌಂದರ್ಯ ದೃಷ್ಟಿಯಿಂದಲೂ, ಫಲಾಹಾರಕ್ಕೆ ಸರಿಗಟ್ಟುವ ಬೇರೊಂದು ಆಹಾರವೇ ಇಲ್ಲ.

**ಅನಾನುಕೂಲತೆಗಳೂ ಪರಿಹಾರಗಳೂ**

**1. ಆದರೆ ಹಣ್ಣುಗಳು ನಶ್ವರ ವಸ್ತು** : ಕೆಲವೇ ದಿನ ಬಾಳುತ್ತವೆ. ನಿಜ, ನಶ್ವರತೆಯು ಹಣ್ಣಿನಲ್ಲಿಯ ಗುಣಾಂಶವೇ ಹೊರತು ದೋಷ ವಲ್ಲ. ಬೇಗ ನಶ್ವರವಾಗುತ್ತಿರುವುದರಿಂದಲೇ ಅವುಗಳಲ್ಲಿ ಸತ್ವಾಂಶ ಹೆಚ್ಚಿಗೆ ಇರುತ್ತದೆ. ಕ್ರಿಮಿ-ಕೀಟಗಳು ಸಹ ಹಣ್ಣುಗಳಿಗೆ ಬೇಗೆ ಹತ್ತುತ್ತವೆ. ಹಣ್ಣುಗಳನ್ನು ತಾಜಾ ಇರುವಾಗಲೇ ತಿನ್ನಬೇಕಾಗುತ್ತದೆ. ಹಣ್ಣುಗಳ ರಸ ತೆಗೆದು ಸೇವಿಸುವುದೂ ಉತ್ತಮ ಕ್ರಮವೇ. ರಸದೊಡನೆ ಹಾಲು ಕೂಡಿಸಿದರೆ ಮತ್ತೂ ಉತ್ತಮ.

ಸೂರ್ಯನ ಬಿಸಿಲು ಹತ್ತಿದ ಹಣ್ಣಿನ ಹೊರಭಾಗವು ಹೆಚ್ಚು ಸಿಹಿ ಇರುತ್ತದೆ. ಅದರಲ್ಲಿಯೇ ಹೆಚ್ಚು ಸತ್ವವೂ ಇರುತ್ತದೆ. ಆದ್ದರಿಂದ ತಿನ್ನಲಿಕ್ಕೆ ಬರುವ ಯಾವುದೇ ಹಣ್ಣಿನ ತೊಗಟೆ ಸಹ ಬಿಸಾಡ ಬಾರದು.

ದ್ರಾಕ್ಷಿ, ಖರ್ಜೂರ, ಅಂಜೂರ, ಬಾಳೆಹಣ್ಣು ಮೊದಲಾದ ಎಷ್ಟೋ ಹಣ್ಣುಗಳನ್ನು ಬಿಸಿಲಿನಲ್ಲಿ ಒಣಗಿಸಿ ಇಟ್ಟು, ಬೇಕಾದಾಗ ಸೇವಿಸಬರುತ್ತದೆ. ಹೀಗೆ ಬಿಸಿಲಿನಿಂದ ಒಣಗಿಸಿದ ಹಣ್ಣುಗಳೂ ಶ್ರೇಷ್ಠ ಆಹಾರವೇ. ಅವುಗಳಲ್ಲಿಯ ಸತ್ವಾಂಶ ನಷ್ಟವಾಗಿರುವುದಿಲ್ಲ. ನೀರಿನ ಅಂಶ ಮಾತ್ರ ಕಡಿಮೆ ಆಗಿರುತ್ತದೆ.

ಆದರೆ ಜ್ಯೂಸ್, ಜೆಲ್ಲಿ, ಜ್ಯಾಮ್, ಚಿಪ್ಸ್ ಮೊದಲಾದ ಕ್ರಿಮಿ ಪ್ರತಿಭಂದಕ ರಸಾಯನಗಳನ್ನು ಹಾಕಿ ಡಬ್ಬಿ ಬಾಟ್ಲಿ ಗಳಲ್ಲಿ ಪ್ಯಾಕ್‌ಮಾಡಿ ಇರಿಸಿದ, ಹಣ್ಣುಗಳ ವಿವಿಧ ಪ್ರಕಾರ ಗಳು ಬಹುಕಾಲ ಉಪಯೋಗಕ್ಕೆ ಸಿಗುತ್ತವೆಯೇನೋ ನಿಜ. ಆದರೆ ಆರೋಗ್ಯ ದೃಷ್ಟಿಯಿಂದ ಅವು ಅಷ್ಟೊಂದು ಹಿತಕರವಲ್ಲ.

**2. ಹಣ್ಣುಗಳು ಹಂಗಾಮಿನಲ್ಲಷ್ಟೇ ಸಿಗುತ್ತವೆ** : ಯಾವಾಗಲೂ ಸಿಗುತ್ತಿರುವುದಿಲ್ಲ. ನಿಜ, ಆದರೆ ಪ್ರತಿ ತಿಂಗಳಲ್ಲಿಯೂ ಒಂದಿಲ್ಲೊಂದು ಹಣ್ಣಿನ ಹಂಗಾಮ ಇದ್ದೇ ಇರುತ್ತದೆ. ಆಯಾ ಹಂಗಾಮಿನ ಹಾಗೂ ಆಯಾ ಸ್ಥಳದಲ್ಲಿ ಬೆಳೆಯುವ ಹಣ್ಣುಗಳೇ ಆಯಾ ಹಂಗಾಮಿನಲ್ಲಿ ಹೆಚ್ಚು ಹಿತಕಾರಿ ಯಾಗಿರುತ್ತವೆ. ಆದ್ದರಿಂದ ಅಂಥ ವಿವಿಧಹಣ್ಣುಗಳನ್ನೇ ಸೇವಿಸಬೇಕು ಮತ್ತು ಅನುಕೂಲ ಇರುವವರು ಹಣ್ಣಿನ ಗಿಡ ಬೆಳೆಸಬೇಕು. ಬಾಳೆಹಣ್ಣು, ಪಪಾಯಿ ಮೊದಲಾದವು ಗಳಂತೂ ಇಡೀ ವರ್ಷದಲ್ಲಿ ಸಿಕ್ಕೇ ಸಿಗುತ್ತವೆ.

**3. ಹಣ್ಣುಗಳು ತುಟ್ಟಿ** : ಇರುವುದರಿಂದ ಹೆಚ್ಚು ಪ್ರಮಾಣದಲ್ಲಿ ಸೇವಿಸಲು ಆರ್ಥಿಕ ದೃಷ್ಟಿಯಿಂದ ಸಾಧ್ಯವಾಗುವುದಿಲ್ಲ ನಿಜ.

ಆದರೆ ಇಂದು ನಾವು ಹೆಚ್ಚು ಹೆಚ್ಚು ಧಾನ್ಯಾಹಾರವನ್ನೇ ತಿಂದು ನಮ್ಮ ಹೊಟ್ಟೆಯ ಗಾತ್ರ ಬೆಳೆಸಿಕೊಂಡಿದ್ದೇವೆ. ಹಣ್ಣು ಸತ್ವಯುತ ಆಹಾರವಾದ್ದರಿಂದ ಸ್ವಲ್ಪವೇ ಸಾಕಾಗುತ್ತವೆ. 'ಹೊಟ್ಟೆ ತುಂಬ' ತಿನ್ನುವುದೇನೂ ಅವಶ್ಯವಿಲ್ಲ. ಮೊದಮೊದಲು ಹೊಟ್ಟೆ ತುಂಬಿದಂತೆ, ಹಸಿವೆ ಹಿಂಗಿದಂತೆ ಅನಿಸದಿದ್ದರೂ ನಮ್ಮ ಹೊಟ್ಟೆಯು ಕ್ರಮೇಣ ಫಲಹಾರಕ್ಕೂ ಹೊಂದಿಕೊಳ್ಳುತ್ತದೆ.

ಕೊನೆಯದಾಗಿ ಎಲ್ಲರಿಗೂ ಸಂಪೂರ್ಣ ಫಲಾಹಾರ ವನ್ನೇ ಮಾಡಲು ಸಾಧ್ಯವಾಗದಿರಬಹುದು ಆದರೆ ಫಲಾಹಾರದ ಮಹತ್ವವನ್ನು ಗಮನಿಸಿ, ನಮ್ಮ ದಿನನಿತ್ಯದ ಆಹಾರದಲ್ಲಿ ಹಣ್ಣುಗಳಿಗೂ ತಕ್ಕ ಸ್ಥಾನ ಇರಿಸಲು ಪ್ರತಿಯೊಬ್ಬರೂ ಪ್ರಯತ್ನಿಸಬಹುದು.

-ಮುಂದುವರಿಯುತ್ತದೆ.

* ನಿಸರ್ಗ ಚಿಕಿತ್ಸಾ ಸಮಿತಿ. ಬೆಂಗೇರಿ, ಹುಬ್ಬಳ್ಳಿ.







## ತೀವ್ರರೋಗಗಳಲ್ಲಿ ನಿಸರ್ಗೋಪಚಾರ

-ಜಿ.ವಿ. ವೆಂಕಟನಾರಾಯಣ ಶಾಸ್ತ್ರಿ *

**ವಿಶ್ರಾಂತಿ ಮತ್ತು ಪ್ರಾರ್ಥನೆ :**

ಸಂಪೂರ್ಣ ಶಾರೀರಿಕ ಮತ್ತು ಮಾನಸಿಕ ವಿಶ್ರಾಂತಿಯೇ ಈಗಿನ ಅಗತ್ಯ, ನಂತರ ಪ್ರಾರ್ಥನೆ.

**ಉಪವಾಸ :**

ಇದು ನಿಸರ್ಗವೇ ನಿಯಮಿಸಿದ ಮೊದಲ ಔಷಧ. ಜ್ವರದಲ್ಲಿಯೂ ಸಹ ಆಹಾರವನ್ನು ಕೊಡಿರೆಂದು ಹೇಳು ವವರೂ ಉಂಟು. ಜ್ವರವಿರುವಾಗ ಆಹಾರ ಕೊಟ್ಟರೇ ಶಕ್ತಿ ಬರುವುದಿಲ್ಲ. ಒಂದೆರಡು ದಿನ ಘನಾಹಾರವನ್ನು ಬಿಟ್ಟರೆ ಅನಾಹುತವಾಗುವುದಿಲ್ಲ. ನಿಸರ್ಗದ ಇಚ್ಛೆಯೇ ನೀವೂ ಆಹಾರ ಬಿಡಲೆಂದು. ಆಗ ತೆಗೆದುಕೊಂಡ ಆಹಾರವೇ ವಿಷವಸ್ತುವಾಗಿ ಪರಿಣಮಿಸಿ, ಅದೂ ಸಹ ಕೂಡಿದ ಕೊಳೆಯ ಜೊತೆ ಸೇರಿ ಮತ್ತಷ್ಟು ಹೊರೆ ಹೆಚ್ಚುತ್ತದೆ. ಈಗ ಆಹಾರದ ಸೇವನೆ ಅವೈಜ್ಞಾನಿಕ. ಕೆಲವರು ಹಸಿವೆಯಾದರೆ ಆಹಾರವನ್ನು ಸೇವಿಸಿ ಎನ್ನುತ್ತಾರೆ. ಆಗ ಹಸಿವೆಯಾಗುವ ಸಂಭವ ಬಹಳ ಕಡಿಮೆ, ಇಲ್ಲವೆಂದರೂ ಸರಿ, ಜ್ವರ ಬರುವುದಕ್ಕೆ ಮುಂಚೆಯೇ ಹಸಿವೆಯು ನಿಂತು ಹೋಗಿರುತ್ತದೆ. ಬಾಯಿ ಕಹಿ, ನೆಗಡಿ ಇತ್ಯಾದಿಗಳೆಲ್ಲಾ ಉಪವಾಸದ ಕಡೆಗೆ ಕೈ ತೋರಿಸುತ್ತವೆ. ಜ್ವರ ಬಿಡುವವರೆವಿಗೂ ಬರೀ ಬಿಸಿನೀರನ್ನು ಕುಡಿದುಕೊಂಡು ಇರಬೇಕು. ಇಲ್ಲದಿದ್ದರೆ, ಆ ಬಿಸಿನೀರಿಗೆ ನಿಂಬೆ, ಕಿತ್ತಳೆ, ಮೂಸಂಬಿ ಯಾವುದಾದರೂ ರಸವನ್ನು ಹಾಕಿ ಆಗಾಗ ಸ್ವಲ್ಪ ಸ್ವಲ್ಪ ಕುಡಿಯುತ್ತಿರಬೇಕು. ಎಳನೀರಾದರೂ ನಡೆದೀತು. ಯಾವುದೂ ಸಿಕ್ಕದಿದ್ದಲ್ಲಿ ಗಂಜಿ, ಸಕ್ಕರೆ ಹಾಕಬಾರದು, ಬೆಲ್ಲ, ಅಕ್ಕಿರವೆ, ಗೋಧಿಯವ ರವೆಗಿಂತ ಉತ್ತಮ. ತುಂಬಾ ತೆಳ್ಳಗೆ ಮಾಡಿ ಕುಡಿಯಬೇಕು. ಜ್ವರ ಬಿಡುವವ ರೆವಿಗೂ ಇದೇ ಆಹಾರ.

**ಎನಿಮಾ :**

ಉಗುರುಬೆಚ್ಚಗಿನ ನೀರಿನಿಂದ ದಿನಕ್ಕೊಮ್ಮೆ ಅಹಿಂಸಾತ್ಮಕ ಎನಿಮಾ ತೆಗೆದುಕೊಳ್ಳಬೇಕು. ಶರೀರದಲ್ಲಿ ಶಾಖ ಹೆಚ್ಚಿದಾಗ ಮಲಬದ್ಧತೆಯಾಗುವ ಸಂಭವ ಹೆಚ್ಚು ಅಥವಾ ಮಲಬದ್ಧತೆ ಯಾದ್ದರಿಂದ ಶರೀರದ ಕಾವು ಹೆಚ್ಚಿರಲೂಬಹುದು. ಎನಿಮಾ ಈಗಿನ ಅತ್ಯಂತ ಅವಶ್ಯಕತೆ. ಇದರಿಂದ ಕೊಳೆಯು ಬಹಳಷ್ಟು ಅಂಶ ಹೊರದೂಡಲ್ಪಡುತ್ತದೆ.

**ಹಬೆಸ್ನಾನ :**

ಜ್ವರದ ಪ್ರಾರಂಭದಲ್ಲಿ ಮೈಬೆವರುವುದಿಲ್ಲ. ಆದ್ದರಿಂದ ಹಿಂದೆ ತಿಳಿಸಿದಂತೆ ಮನೆಯಲ್ಲಿಯೇ ಮಾಡುವ ಹಬೆಸ್ನಾನದಿಂದ ಕೃತಕವಾಗಿ ಮೈ ಬೆವರಿಸಿದರೆ ಸಾಕಷ್ಟು ಕೊಳೆಯು ಹೊರಗೆ ಹೋಗಿ ಮೈಕೈ ನೋವು ಕಡಿಮೆಯಾಗುವುದು. ಇದನ್ನು ಜ್ವರ ಬರುವ ಮುಂಚೆ ಅಥವಾ ಜ್ವರ ಬಂದ ತಕ್ಷಣ ಮಾಡ ಬೇಕು. ಆಗ ಸಾಕಷ್ಟು ಶಕ್ತಿ ಶರೀರದಲ್ಲಿ ಇರುತ್ತದೆ. ಆದರೂ ಆಗಾಗ್ಗೆ ಮಾಡಬಾರದು.

**ಪೂರ್ಣಪ್ರಾಶೋದಕ ಪಟ್ಟಿಯನ್ನು ದಿನಕ್ಕೆ ಎರಡು ಸಲ ಹಾಕುವುದು**

ದಿನಕ್ಕೆ ಎರಡು ಸಲ ತಣ್ಣೀರಿನ ಶಿರಸ್ನಾನ ಅಥವಾ ಶರೀರ ಪೂರ್ಣ ತಣ್ಣೀರಿನ ಸ್ಪಾಂಜ್ ಬಾತ್.

ದಿನಕ್ಕೊಮ್ಮೆ ತಣ್ಣೀರಿನ ಕಟಿಸ್ನಾನ ೨೦ ನಿಮಿಷಗಳ ಕಾಲ.

ಹೊಟ್ಟೆಗೆ ತಂಪುಪಟ್ಟಿ ಅಥವಾ ಮಣ್ಣುಪಟ್ಟಿ, ೨೦ ನಿಮಿಷಗಳ ಕಾಲ. ಆಗಾಗ ತಲೆಗೆ ತಂಪುಪಟ್ಟಿ, ತಲೆಯ ನೋವು ತುಂಬಾ ಹೆಚ್ಚಿದ್ದರೆ ಐಸನ್ನೂ ಬಳಸಬಹುದು. ಆದರೆ ಹೆಚ್ಚು ಉಪಯೋಗ ಬೇಡ. ತಣ್ಣೀರೇ ಸಾಕು.

ಒಮ್ಮೊಮ್ಮೆ ಶರೀರಕ್ಕೆಲ್ಲಾ ವಾಯುಸ್ನಾನ. ಕಡಿಮೆ ಬಟ್ಟೆ ಯನ್ನಿ ಧರಿಸಿ ಗಾಳಿಯಲ್ಲಿ ಕೂಡುವುದು. ರೂಮಿನ ಒಳಗೇ ಮಾಡಬಹುದು. ಬೆಳಿಗ್ಗೆ ಮತ್ತು ಸಂಜೆ ಅರ್ಧರ್ಧ ಗಂಟೆಗಳ ಕಾಲ ಸೂರ್ಯಸ್ನಾನ ಮಾಡಿಸಬೇಕು.

ರಾತ್ರಿ ಮಲಗುವ ಮುನ್ನ ಬಿಸಿನೀರಿನ ಪಾದಸ್ನಾನ.

**ಬಿಸಿನೀರಿನ ಟಬ್‌ಬಾತ್ :**

ಸಾಧಾರಣವಾಗಿ ಜ್ವರ ಬಂದಾಗ ಮೈಕೈ ನೋವಿರುತ್ತದೆ. ಇದನ್ನು ಬಿಸಿನೀರಿನಿಂದಲೂ, ಶರೀರದ ಶಾಖವನ್ನು ಕಡಿಮೆ ಮಾಡಲು ತಣ್ಣೀರಿನ ಪ್ರಯೋಗದಿಂದಲೂ ಉಪಚರಿಸಬೇಕು.

ಮತ್ತೊಂದು ಬಹಳ ಮುಖ್ಯ ವಿಚಾರ, ಜ್ವರದಲ್ಲಿ ಅದೆಷ್ಟೊ

* 'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.

ಹೆಚ್ಚು ನೀರು ಕುಡಿಯಬೇಕು. ಆಗ ಬಾಯಾರಿಕೆ ಹೆಚ್ಚಿರುತ್ತದೆ. ಅದನ್ನು ನಿರ್ಲಕ್ಷಿಸಲೇಬಾರದು.

**ಕೆಲವು ಸೂಚನೆಗಳು :**

೧. ಜ್ವರದಲ್ಲಿ ಜಲಚಿಕಿತ್ಸೆ ಬಹಳ ಉಪಕಾರಿ. ತಣ್ಣೀರಿನ ಚಿಕಿತ್ಸೆ ಉತ್ತಮ. 'ಏನು! ಜ್ವರ ಬಂದಾಗ ತಣ್ಣೀರೇ? ಹೌದು. ಈಗ ನಮ್ಮ ಮೊದಲ ಕರ್ತವ್ಯ ಜ್ವರದ ಕಾವನ್ನು ಅಪಾಯದ ಮಟ್ಟದಿಂದ ಮಟ್ಟದಿಂದ ಇಳಿಸುವುದು. ಇಲ್ಲದಿದ್ದರೆ ಮುಂದೆ ಅನೇಕ ತೊಂದರೆಗಳಿಗೆ ಸಿಕ್ಕಿಹಾಕಿಕೊಳ್ಳಬೇಕಾಗುವುದು. ತಣ್ಣೀರು ಈ ಕೆಲಸವನ್ನು ಸಮರ್ಪಕವಾಗಿ ಮಾಡಬಲ್ಲದು. ಮಂಜು ಗಡ್ಡೆಯ ಅವಶ್ಯಕಯೆ ಅಷ್ಟಿಲ್ಲ. ಆದರೂ ಕಾವು ತುಂಬಾ ಹೆಚ್ಚಾಗಿದ್ದಲ್ಲಿ ಅದನ್ನು ಬಳಸಬಹುದು. ಅದೂ ತಲೆಗೆ ಮಾತ್ರ, ವಯಸ್ಸಾದವರು ಬಿಸಿನೀರನ್ನು ಬಳಸಲಿ. ಜ್ವರದ ಪ್ರಾರಂಭದಲ್ಲಿ ಹಬೆ ಸ್ನಾನ ಒಂದನ್ನು ಬಿಟ್ಟು ಮಿಕ್ಕೆಲ್ಲವೂ ತಣ್ಣೀರಿನ ವ್ಯವಹಾರವೇ. ೨. ಜ್ವರದ ರೋಗಿಯು ಸ್ವತಂತ್ರವಾಗಿ ಏನನ್ನೂ ಮಾಡಿಕೊಳ್ಳಲಾರ. ಆ ಕಾಲದಲ್ಲಿ ಮನೆಯಲ್ಲಿನ ಯಾರಾದರೂ ಒಬ್ಬರು ಅವನ ಬಗ್ಗೆ ಹೆಚ್ಚು ನಿಗಾವಹಿಸಿ ಉಪಚಾರಗಳನ್ನು ಮಾಡಬೇಕು. ರೋಗಿಗೆ ಇವುಗಳಲ್ಲಿ ಕೆಲವು ಬೇಡವೆನಿಸಿದರೆ ಬಲವಂತ ಮಾಡಬಾರದು. ಉಪವಾಸ ಮತ್ತು ಎನಿಮಾ ಇವೆರಡಾ ಇರಲೇಬೇಕು. ಉಳಿದವುಗಳನ್ನು ಕಡಿತ ಮಾಡಬಹುದು. ಆದರೂ ಒಮ್ಮೆಯಾದರೂ ತಣ್ಣೀರಿನ ಸ್ನಾನ ಕಡೆಗೆ ಸ್ಪಾಂಜ್‌ಬಾತ್ ಆದರೂ ಮಾಡಿಸಲೇಬೇಕು. ೩. ಹೆಚ್ಚು ಹೊತ್ತು ನಿರ್ದೆ ಮಾಡಿದರೆ ಉತ್ತಮ. ಉಪವಾಸದ ಜೊತೆಗೆ ನಿದ್ರೆ ಮತ್ತೊಂದು ನೈಸರ್ಗಿಕ ಔಷಧಿ. ನಿದ್ರೆ ಮಾಡುತ್ತಿದ್ದರೆ ಉಪಚಾರಕ್ಕಾಗಿ ಎಬ್ಬಿಸುವುದು ಬೇಡ. ನಿದ್ರೆಯಲ್ಲಿ ದೊರೆಯುವ ವಿಶ್ರಾಂತಿ ಮತ್ತೆ ಯಾವುದರಿಂದಲೂ ದೊರೆಯುವುದಿಲ್ಲ. ಆದರೆ ನಿದ್ರೆ ಬರುವುದು ಕೊಂಚ ಕಷ್ಟ ಅದಕ್ಕಾಗಿ ಬಿಸಿನೀರಿನ ಪಾದ ಸ್ನಾನಕ್ಕೆ ಮೊರೆ ಹೋಗುವುದು.

**ಎಚ್ಚರಿಕೆಗಳು :** ೧. ಗಾಬರಿಯಾಗಬಾರದು. 'ಜ್ವರ ನಮ್ಮ ಮಿತ್ರ' ಎಂಬುದನ್ನು ಮರೆಯಬಾರದು. ೨. ರೋಗಿಯ ರೂಮಿನಲ್ಲಿ ಒಳ್ಳೆಯ ಗಾಳಿಯಾಡುತ್ತಿರಬೇಕು. ೩. ಜ್ವರದ ಪ್ರಾರಂಭದಲ್ಲಿ ಹಾಲನ್ನು ಕೊಡಲೇಬಾರದು. ಜ್ವರ ಬಿಟ್ಟ ನಂತರ ಹಾಲನ್ನು ಕೊಡಬಹುದು. ೪. ಜ್ವರ ಬಂದಿರುವಾಗ ಬ್ರೆಡ್, ಬನ್‌ಗಳನ್ನು ಕೊಡುವ ರೂಢಿ ಒಳ್ಳೆಯದಲ್ಲ. ೫. ಬೇರೆಯ ಔಷಧಿಗಳ ಅವಶ್ಯಕತೆ ಇಲ್ಲ. ಅಲ್ಲದೆ ಅವು ತಮ್ಮ ಪಾರ್ಶ್ವಪರಿಣಾಮದಿಂದ ಜ್ವರವನ್ನು ಅದುಮುವುದರಿಂದ ಮುಂದೆ ತೊಂದರೆಗೆ ಒಳಗಾಗಬಹುದು. ೬. ರೋಗಿಗೆ ತೊಂದರೆ ಕೊಟ್ಟು ಅತಿ ಉಪಚಾರ ಮಾಡಬಾರದು. ಅದು ಹಿತವಾಗಿರಬೇಕು.

**ಮನೆಮದ್ದು :** ಜ್ವರವು ಬರಲು ಒಳಗಿನ ಕೊಳೆಯೇ ಮೊದಲನೆಯ ಕಾರಣ. ಅದನ್ನು ಸ್ಫೋಟಿಸುವಂತೆ ಮಾಡಲು ಅನೇಕ ಕಾರಣಗಳು ಕಣ್ಣಿಗೆ ಬೀಳುತ್ತವೆ. ಕ್ರಿಮಿ, ಕಲುಷಿತ ಗಾಳಿ. ನೀರು, ವಾತಾವರಣದಲ್ಲಾದ ಬದಲಾವಣೆ ಇತ್ಯಾದಿಗಳೆಲ್ಲಾ ಎರಡನೆಯ ಕಾರಣಗಳು. ಇವೆಲ್ಲದರ ಹಿಂದೆ ಅಜೀರ್ಣ ಇದ್ದೇ ಇರುತ್ತದೆ. ಸರಿಯಾದ ಜೀರ್ಣವಾಗದ ಆಹಾರದಿಂದ ಉಂಟಾದ ಕೊಳೆಯೇ ಜ್ವರದ ಜನಕ. ಹಿಂದಿನವರು ಮಕ್ಕಳಿಗೆ ಜ್ವರ ಬಂದ ಕೂಡಲೇ ಇದು 'ಮಂದ'ದ ಜ್ವರವೆಂದು ಹೇಳುತ್ತಿದ್ದರು. ಅಂದರೆ, ತೆಗೆದುಕೊಂಡ ಆಹಾರ ಸರಿಯಾಗಿ ಜೀರ್ಣವಾಗಿಲ್ಲವೆಂದು ಇದರ ಅರ್ಥ. ಅದು ಜೀರ್ಣವಾಗಲು ಮನೆಯಲ್ಲಿಯೇ ಇರುವ ಕೆಲವು ವಸ್ತುಗಳು ಅಥವಾ ಪರಿಸರದಲ್ಲಿನ ಕೆಲವು ಮೂಲಿಕೆಗಳು ಮುಂತಾದವುಗಳನ್ನು ಬಳಸುತ್ತಿದ್ದರು. ಇವುಗಳು ಆಯಾ ಪ್ರಾಂತ್ಯಗಳಿಗೆ ಬದಲಾವಣೆಯಾಗುತ್ತಿತ್ತು. ಆಯಾ ಪ್ರಾಂತ್ಯದವರು ಅವುಗಳನ್ನು ನೆನಪಿಗೆ ತಂದುಕೊಂಡು ಬಳಸುವುದು ಉತ್ತಮ. ಆಯುರ್ವೇದ ಈ ವಿಷಯದಲ್ಲಿ ಬಹಳವಾಗಿ ಹೇಳಿದೆ. ಅದರ ಜ್ಞಾನವಿರುವವರು ಅದನ್ನು ಬಳಸಲಡ್ಡಿಯಿಲ್ಲ. ಆ ತಿಳುವಳಿಕೆ ಇಲ್ಲದಿದ್ದರೆ ದುಃಖಿಸಬೇಕಿಲ್ಲ. ಮನೆಯಲ್ಲಿ ದೊರೆಯುವ ಕೆಳಗಿನ ಪದಾರ್ಥಗಳನ್ನು ಉಪಯೋಗಿಸಿ. ಓಮ, ಶುಂಠಿ, ಕೊತ್ತಂಬರಿ, ಮೆಣಸಿ, ಜೀರಿಗೆ, ಅಮೃತಬಳ್ಳಿ ಮುಂತಾದವುಗಳ ಕಷಾಯ ಮಾಡಿ ಕುಡಿಯಬಹುದು.

**ಕಷಾಯ ಮಾಡುವ ವಿಧಾನ : ಮಂದದ ಜ್ವರಕ್ಕೆ :** ೧/೨ ಚಮಚ ಓಮ, ೧/೨ ಚಮಚ ಜೀರಿಗೆಗೆ ಎರಡು ಲೋಟ ನೀರನ್ನು ಹಾಕಿ ಒಲೆಯ ಮೇಲಿಟ್ಟು ಚೆನ್ನಾಗಿ ಕುದಿಸಿ ಅದು ಒಂದು ಲೋಟವಾದ ನಂತರ ಅದನ್ನು ಶೋಧಿಸಿ ಅದಕ್ಕೆ ಬೆಲ್ಲ ಮತ್ತು ಹಾಲು ಹಾಕಿಕೊಂಡು ಕುಡಿಯುವುದು. ಒಂದು ದಿನಕ್ಕೆ ಎರಡು ಸಲ.

**ಉಳಿದ ಜ್ವರಗಳಿಗೆ :** ೧/೨ ಚಮಚ ಕೊತ್ತಂಬರಿಬೀಜ, ೫–೬ ಕಾಳು ಕರೀ ಮೆಣಸು, ೧/೨ ಚಮಚ ಜೀರಿಗೆ, ೧ ಚೂರು ಶುಂಠಿ, ಇದಕ್ಕೆ ೨ ಗ್ಲಾಸ್ ನೀರು ಹಾಕಿ ಕುದಿಸಿ ೧ ಲೋಟಕ್ಕೆ ಇಳಿದ ನಂತರ ಶೋಧಿಸಿ, ಸ್ವಲ್ಪ ಬೆಲ್ಲ, ಹಾಲು ಹಾಕಿ ಕುಡಿಯುವುದು.





**ಎಲ್ಲಾ ಜ್ವರಗಳಿಗೆ :** ಅಮೃತಬಳ್ಳಿಯ ಎಲೆಗಳನ್ನು ತಂದು ನೀರು ಹಾಕಿ ಕುದಿಸುವುದು. ಚೆನ್ನಾಗಿ ಕುದ್ದ ನಂತರ ಅದನ್ನು ಶೋಧಿಸಿ, ಅದಕ್ಕೆ ಬೆಲ್ಲ, ಹಾಲು ಹಾಕಿ ಕುಡಿಯುವುದು.

ವಿ.ಸೂ. : ಜ್ವರಕ್ಕೆ ಹೇಳಿದ ನೈಸರ್ಗಿಕ ಉಪಚಾರಗಳ ಜೊತೆಗೆ ಈ ಕಷಾಯ ಕೊಡಬೇಕೇ ವಿನಃ ಬರೀ ಕಷಾಯದಿಂದಲೇ ವಾಸಿ ಮಾಡಿಕೊಳ್ಳಲು ಪ್ರಯತ್ನಿಸುವುದು ಸರಿಯಾದ ಮಾರ್ಗವಲ್ಲ.

**ಜ್ವರ ಬಿಟ್ಟಿರುವ ಲಕ್ಷಣಗಳೇನು :**

ಮೊದಲ ಲಕ್ಷಣ ಮೈ ಬೆವರುವುದು, ಎರಡನೆಯದು, ಬಾಯಿಯ ಕಹಿ ಕಡಿಮೆಯಾಗುವುದು. ಮೂರನೆಯದು ನಾಲಗೆಯ ಬಣ್ಣ ಬಿಳಿಯಿಂದ ಕೆಂಪು ಬಣ್ಣಕ್ಕೆ ತಿರುಗುವುದು. ಮೈ–ಕೈ ನೋವುಗಳು ಬಿಟ್ಟು ಶರೀರ ಹಗುರವಾಗುವುದು.

**ಜ್ವರದ ಜೊತೆಗಾರರು :** ಜ್ವರ ಬಿಟ್ಟರೂ ಅದರ ಜೊತೆಗಾರರು ಬಿಡುವುದಿಲ್ಲ. ಅದಕ್ಕಿಂತ ಮುಂಚೆ ಬಂದು ಅದು ಬಿಟ್ಟು ಎಷ್ಟೋ ದಿನಗಳ ಮೇಲೆ ಹೋಗುವವರು ಇವರು. ನೆಗಡಿ, ಕೆಮ್ಮು, ಹೊಟ್ಟೆಯ ಕಚ್ಚು, ಭೇದಿ, ತಲೆನೋವು, ಮೈಕೈನೋವು, ಕಿವಿನೋವು, ಇತ್ಯಾದಿ. ಇವರುಗಳಿಗೆ ಆಯಾ ಕಾಯಿಲೆಗಳಲ್ಲಿ ಹೇಳಿದ ಉಪಚಾರ ಮಾಡಬೇಕು.

ಜ್ವರ ಬಿಟ್ಟ ನಂತರವೂ ಒಂದೆರಡು ದಿನ ಎನಿಮಾ ಮುಂದು ವರಿಸಬೇಕು. ದೇಹಕ್ಕೆ ಆಹಾರವನ್ನು ಕೊಟ್ಟಿಲ್ಲದ ಕಾರಣ ಮಲವು ತಯಾರಾಗಿರುವುದಿಲ್ಲ. ಅದು ಮತ್ತೆ ಪೂರ್ವಸ್ಥಿತಿಗೆ ಬರುವವರೆ ವಿಗೂ, ಕೊಂಚ ದಿನಗಳವರೆವಿಗೂ ಅಹಿಂಸಾತ್ಮಕ ಎನಿಮಾದ ಸಹಾಯ ಅಗತ್ಯ. ಜ್ವರ ಬಂದಾಗ ತಡೆಹಿಡಿದಿದ್ದ ಬಾಯಿಚಪಲ ಒಮ್ಮೆಗೆ ಮುಗಿಲೆತ್ತರಕ್ಕೆ ಏರುತ್ತದೆ. ಜ್ವರವಿರುವಾಗ ನಿಸರ್ಗವೇ ನಮ್ಮ ಸಹಾಯಕ್ಕೆ ಬರುತ್ತದೆ. ಆಗ ಆಹಾರ ಬಿಡಲು ಕಷ್ಟವಲ್ಲ. ಆದರೆ ಆ ಜ್ವರ ಬಿಟ್ಟ ನಂತರ ಕಠಿಣವಾಗುತ್ತದೆ. ಅದರಲ್ಲೂ ಮಕ್ಕಳಲ್ಲಿ ಈ ಕಾಲ ಬಹಳ ಕಷ್ಟಕಾಲ. ಆದ್ದರಿಂದಲೇ ಮಕ್ಕಳಿಗೆ ಜ್ವರ ಬಿಟ್ಟ ನಂತರ ಭೇದಿ ಪ್ರಾರಂಭವಾಗುತ್ತದೆ. ಆಗ ಮನೆಯಲ್ಲಿ ಲಘುವಾದ ಆಹಾರಗಳನ್ನದೆ ಕರಿದ, ಹುರಿದ ಮುಂತಾದ ಗುರುತ್ವದ ಆಹಾರಗಳನ್ನು ತಯಾರಿಸಲೇಬಾರದು. ಈಗ ಹಾಗೇನಾದರೂ ಬಾಯಿಗೆ ಬಂದದ್ದು ತಿಂದರೆ ಮತ್ತೆ ಜ್ವರ ಬರುವ ಸಂಭವ ಹೆಚ್ಚು. ಎರಡನೆಯ ಸಲ ಜ್ವರ ಬಂದರೆ ಅದನ್ನು ಹತೋಟಿಗೆ ತರುವುದು ಹೆಚ್ಚು ಕಷ್ಟ ಆದ್ದರಿಂದ ಮೊದಲೇ ಎಚ್ಚರಿಕೆಯಿಂದ ಇರುವುದು ಉತ್ತಮ.

ಜ್ವರ ಬಿಟ್ಟ ಮೊದಲ ದಿನ ಬರೀ ಹಣ್ಣಿನ ರಸಗಳಲ್ಲಿರುವುದು. ನಂತರ ಒಂದು ಹೊತ್ತು ಬೇಯಿಸಿದ ತರಕಾರಿ, ಮತ್ತೊಂದು ಹೊತ್ತು ಹಣ್ಣು, ಮೂರನೆಯದು ಹಣ್ಣಿನ ರಸ. ಆಮೇಲೆ ಎರಡು ವೇಳೆ ಬೇಯಿಸಿದ ತರಕಾರಿ ಒಮ್ಮೆ ಹಣ್ಣುಗಳು. ಮೂರು–ನಾಲ್ಕು ದಿನಗಳು ಕಳೆದ ನಂತರ ಅನ್ನ–ಸಾರು, ಸೂಖಿ ಚಪಾತಿ ಇತ್ಯಾದಿಗಳನ್ನು ಅಲ್ಪಪ್ರಮಾಣದಲ್ಲಿ ಮುಂದುವರಿಸಬೇಕು. ಕೆಲವರಿಗೆ ಹಣ್ಣು ಇತ್ಯಾದಿಗಳು ಸೇರುವುದಿಲ್ಲ. ಅಂತಹವರು, ಕೆಂಪಕ್ಕಿ ಅನ್ನ–ಮೆಣಸಿನ ಸಾರು, ಹಾಲು–ಅನ್ನ ಇತ್ಯಾದಿಗಳನ್ನು ತಿನ್ನಲು ಪ್ರಾರಂಭಿಸಬಹುದು. ಅದೂ ಅಲ್ಪಪ್ರಮಾಣದಲ್ಲಿ.

ಎಲ್ಲಾ ತೀವ್ರಕಾಯಿಲೆಗಳ ತಳದಲ್ಲೂ ಜ್ವರವಿದ್ದೇ ಇರುತ್ತದೆ. ಉದಾ: ಡಿಫ್ತೀರಿಯಾ, ದಡಾರ, ಚಿಕನ್‌ಫಾಕ್ಸ್, ಇತ್ಯಾದಿ. ಈ ಕಾಯಿಲೆಗಳು ಕಡಿಮೆಯಾದಂತೆ ಜ್ವರವೂ ಕಡಿಮೆಯಾಗುತ್ತದೆ. ಈ ಕಾಯಿಲೆಗಳಿಗೂ ಇಲ್ಲಿ ಇದೇ ಉಪಚಾರವಿರುವುದರಿಂದ ಜ್ವರಕ್ಕೆ ಬೇರೆ ಉಪಚಾರದ ಅವಶ್ಯಕತೆ ಇಲ್ಲ.

**ಪ್ರಶ್ನೆ :** ಉಪಚಾರ ನಡೆಸದೇ ಜ್ವರ ಹಾಗೆಯೇ ಹೋಗುವುದಿಲ್ಲವೇ?

ಕೆಲವರು ಉಪವಾಸ ಒಂದರಿಂದಲೇ ಜ್ವರದಿಂದ ಬಿಡುಗಡೆ ಹೊಂದುತ್ತಾರೆ. ಆದರೆ ಎನಿಮಾ, ತಣ್ಣೀರಿನ ಪಟ್ಟಿಗಳು, ಇತ್ಯಾದಿಗಳನ್ನು ಹಿತ–ಮಿತವಾಗಿ ಉಪಯೋಗಿಸದಿದ್ದರೆ ಜ್ವರ ಬಿಟ್ಟ ನಂತರ ಹೊಟ್ಟೆಯ ಕಚ್ಚು, ಒಣ ಕೆಮ್ಮು, ಕಿವಿನೋವು ಇತ್ಯಾದಿ ಕಾಯಿಲೆಗಳಿಂದ ನರಳಬೇಕಾಗುತ್ತದೆ. ನೈಸರ್ಗಿಕ ಉಪಚಾರ ಮಾಡಿದ್ದಲ್ಲಿ ಅವುಗಳು ಮುಂದುವರಿಯುವ ಸಾಧ್ಯತೆ ಕಡಿಮೆ. ಹಾಗೆಂದು ರೋಗಕ್ಕಿಂತ ಉಪಚಾರವನ್ನೇ ಹೆಚ್ಚಾಗಿಯೂ ಮಾಡಬಾರದು. ಎಲ್ಲದರಲ್ಲೂ ಮಧ್ಯಮಾರ್ಗವೇ ಶ್ರೇಷ್ಠ

–ಮುಂದುವರೆಯುತ್ತದೆ.

ವಿದ್ಯೆ ಮತ್ತು ಅರಸೊತ್ತಿಗೆಗಳು ಒಂದಕ್ಕೊಂದು ಸರಿದೊರೆಯಾಗಲಾರವು. ಅರಸನಿಗೆ ತನ್ನ ದೇಶದಲ್ಲಿ ಮಾತ್ರ ಗೌರವ ಇಲ್ಲವೆ ಮನ್ನಣೆ ; ಆದರೆ ವಿದ್ಯಾವಂತನಿಗೆ ಎಲ್ಲೆಡೆಯೂ ಮರ್ಯಾದೆ

–ಸುಭಾಷಿತ

## ವಚನಗಳಲ್ಲಿ ಇಷ್ಟಲಿಂಗಪೂಜೆ

–ರುದ್ರಮೂರ್ತಿ ಎಲೆರಾಂಪುರ*

**ದು**ರ್ಗುಣ ದುರ್ವ್ಯಸನಾದಿಗಳ ನಿವಾರಣೆಗಾಗಿ ಶಿವಭಕ್ತಿ ಶಿವಜ್ಞಾನಗಳ ಸಂಪಾದನೆ ಹಾಗೂ ಗುರುಜಂಗಮ, ಪ್ರಸಾದ ಸಿದ್ಧಿಗಾಗಿ ಧರ್ಮಗುರುವನ್ನು ಭಕ್ತಿಯಿಂದ ಕಣ್ಮುಚ್ಚಿ ಧ್ಯಾನ ಮಾಡಬೇಕು.

ಧರ್ಮಗುರುವಿನ ಧ್ಯಾನ :

ಎನ್ನ ಕರಸ್ಥಲದಲ್ಲಿ ಲಿಂಗ ಸಾಹಿತ್ಯವ ಮಾಡಿದ
ಎನ್ನ ಮನಸ್ಥಲದಲ್ಲಿ ಜಂಗಮಸಾಹಿತ್ಯವ ಮಾಡಿದ
ಎನ್ನ ತನುಸ್ಥಲದಲ್ಲಿ ಆಚಾರ ಸಾಹಿತ್ಯವ ಮಾಡಿದ
ಇಂತೀ ತನುಮನ ಪ್ರಾಣವನೇಕವ ಮಾಡಿ
ಕೂಡಲಚನ್ನಸಂಗಮದೇವಾ ನಿಮ್ಮನೆನ್ನ ವಶವ ಮಾಡಿದ
ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂದು
ಬದುಕಿದೆನು.

–ಚೆನ್ನಬಸವಣ್ಣ ೩–೧೦೪೪

ಶಿವ, ಗುರುವೆಂದು ಬಲ್ಲಾತನೆ ಗುರು
ಶಿವ, ಲಿಂಗವೆಂದು ಬಲ್ಲಾತನೆ ಗುರು
ಶಿವ, ಜಂಗಮವೆಂದು ಬಲ್ಲಾತನೆ ಗುರು
ಶಿವ, ಪ್ರಸಾದವೆಂದು ಬಲ್ಲಾತನೆ ಗುರು
ಶಿವ, ಆಚಾರವೆಂದು ಬಲ್ಲಾತನೆ ಗುರು
ಇಂತೀ ಪಂಚವಿಧವೇ ಪಂಚಬ್ರಹ್ಮವೆಂದರಿದ
ಮಹಾಮಹಿಮ ಸಂಗನ ಬಸವಣ್ಣನು
ಎನಗೆಯೂ ಗುರು, ನಿನಗೆಯೂ ಗುರು
ಜಗವೆಲ್ಲಕ್ಕೆಯೂ ಗುರು ಕಾಣಾ, ಗುಹೇಶ್ವರಾ

–ಅಲ್ಲಮಪ್ರಭು, ೨–೧೫೪೩

ಒಮ್ಮೆಯೂ ಶ್ರೀಗುರುವಿನ ಚರಣವ ನೆನೆಯಲೊಡನೆ
ಭವಭಂಧನ ಬಿಡುವುದು
ಗುರುವೇ ಶರಣು ಗುರುಲಿಂಗವೇ ಶರಣು
ಹರಿಬ್ರಹ್ಮಾದಿಗಳಿಗಗೋಚರ ಕೂಡಲಚೆನ್ನಸಂಗನ
ತೋರಿದ ಗುರುವೆ ಶರಣು

–ಚೆನ್ನಬಸವಣ್ಣ ೩–೨೭

ದೀಕ್ಷಾ ಗುರುವಿನ ಧ್ಯಾನ :

ನಂತರ ನಮಗೆ ಇಷ್ಟಲಿಂಗದೀಕ್ಷೆಯನ್ನು ನೀಡಿದ ದೀಕ್ಷಾ ಗುರುವಿನ ಧ್ಯಾನ ಮಾಡಬೇಕು. ಈ ಕೆಳಗಿನ ವಚನವನ್ನು ಭಕ್ತಿಯಿಂದ ಹೇಳಬೇಕು.

ನರಜನ್ಮವ ತೊಡೆದು ಹರಜನ್ಮವ ಮಾಡಿದ
ಗುರುವೇ ನಮೋ
ಭವ ಬಂಧನವ ಬಿಡಿಸಿ ಪರಮಸುಖವ ತೋರಿದ
ಗುರುವೇ ನಮೋ
ಭವಿ ಎಂಬುದು ತೊಡೆದು ಭಕ್ತೆ ಎಂದೆನಿಸಿದ
ಗುರುವೇ ನಮೋ
ಚೆನ್ನಮಲ್ಲಿಕಾರ್ಜುನನ ತಂದೆನ್ನ
ಕೈವಶಕ್ಕೆ ಕೊಟ್ಟ ಗುರುವೇ ನಮೋ ನಮೋ.

–ಅಕ್ಕಮಹಾದೇವಿ, ೫–೨೫೧

ನಿತ್ಯವೆನ್ನ ಮನೆಗೆ ನಡೆದು ಬಂದಿತ್ತೆಂದು
ಮುಕ್ತಿ ಎನ್ನ ಮನೆಗೆ ನಡೆದು ಬಂದಿತ್ತೆಂದು
ಜಯ ಜಯ ಹರಹರಾ ಶಂಕರಾ ಶಂಕರಾ
ಗುರುವೆ ನಮೋ ಪರಮಗುರುವೆ ನಮೋ
ಚನ್ನಮಲ್ಲಿಕಾರ್ಜುನನ ತೋರಿದ ಗುರುವೇ ನಮೋ ನಮೋ

–ಅಕ್ಕಮಹಾದೇವಿ, ೫–೨೬೧

ಜಲಶುದ್ಧಿ : ತುಂಬಿದ ಬಿಂದಿಗೆಯಲ್ಲಿ ಭಸ್ಮ ಲೇಪಿಸಿಕೊಂಡ ಬೆರಳಿನಿಂದ ಓಂಕಾರ ಪ್ರಣವನ್ನು ಬರೆದು ಅಂಗೈ ಮೇಲೆ ಭಸ್ಮ ಧರಿಸಿಕೊಂಡು ಅದನ್ನು ತಂಬಿಗೆಯ ಮೇಲೆ ಮುಚ್ಚಿ ಪಂಚಾಕ್ಷರಿ ಮಂತ್ರವನ್ನು ಪಠಿಸಿ ಆ ಶುದ್ಧೋದಕವನ್ನು ತನ್ನ ಮೇಲೆ ಹಾಗೂ ಪೂಜಾಸಾಮಾಗ್ರಿಗಳಿಗೂ ಸಿಂಪಡಿಸಿ ಕೊಳ್ಳಬೇಕು. ❖

* 'ಅನುಭವ ಮಂಟಪ' 4ನೇ ಅಡ್ಡರಸ್ತೆ, ಬಸವೇಶ್ವರ ಬಡಾವಣೆ, ಕ್ಯಾತ್ಸಂದ್ರ, ತುಮಕೂರು–572 104.

